ಗ್ರಂಥ

ನವಜೀವನ ಭಾಂಡಾರ



# ಧರ್ಮಸಂಭವ

ಅಥವಾ

## ಧರ್ಮದ ಮೂಲತತ್ತ್ವಗಳು.

ಲೇಖಕರು:
**ಪಂಡಿತ ತಾರಾನಾಥರಾಯರು,**
ತುಂಗಭದ್ರಾ.



**ಗ್ರಂಥ ೨.**

ಸಂಪಾದಕರು:
**ಆಲೂರ ವೆಂಕಟರಾಯರು,** ಧಾರವಾಡ.

# ನವಜೀವನ ಗಂಥಭಾಂಡಾರ
# ಧಾರವಾಡ

## ಪ್ರಕಟವಾದ ಗ್ರಂಥಗಳು

(೧) ಆಕಾಶದೊಳಗಿನ ಅದ್ಭುತ ಚಮತ್ಕಾರಗಳು
ಪ್ರೊ. ತಿರುಮಲರಾವ ಪಾಟೀಲ ಎಂ. ಎ
ಒಟ್ಟು ಪುಟ ೧೧೨
ಬೆಲೆ ೧—೨--೦

(೨) ಧರ್ಮಸಂಭವ ಅಥವಾ ಧರ್ಮದ ಮೂಲತತ್ವ
ಗಳು- ಪಂಡಿತ ತಾರಾನಾಥರಾಯರು
ಒಟ್ಟು ಪುಟ- ೧೪೮
ಬೆಲೆ- ೧--೪—೦

## ಮುಂದಿನ ಗ್ರಂಥಗಳು.

(೩) ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು
ಶ್ರೀ. ವಿಷ್ಣು ಹರಿ ಒಡೇರ ಏಂ. ಏ. ಏಲ್,
ಏಲ್. ಬಿ. (ಅಚ್ಚಾಗುತ್ತಲಿದೆ)

(೪) ಶಾರದೆಯ ಸಂಸಾರ ಅಥವಾ ಭಾಷಾಶಾಸ್ತ್ರ
ಪ್ರೊ. ಆರ್. ವ್ಹಿ. ಜಹಾಗೀರದಾರ ಎಂ. ಎ.
(ಲಂಡನ.)

(೫) ಖಾದೀ ಶಾಸ್ತ್ರ- ಶ್ರೀ ಮಂಜಪ್ಪಾ ಹರ್ಡೆಕರ

(೬) ಹಿಂದುಸ್ಥಾನದ ಆರ್ಥಿಕ ಅವನತಿ- ಶ್ರೀ. ಗುರು
ರಾವ ವಾಳವೇಕರ ಬಿ. ಎ. ಎಲ್, ಎಲ್. ಬಿ.

**ಆಲೂರ ವೆಂಕಟರಾಯ,**
ಸಂಪಾದಕ

ನವಜೀವನ ಗ್ರಂಥಭಾಂಡಾರ ಗ್ರಂಥ ೨.



# ಧರ್ಮಸಂಭವ

## ಅಥವಾ

# ಧರ್ಮದ ಮೂಲತತ್ತ್ವಗಳು

ಗ್ರಂಥಕರ್ತರು:

**ಪಂಡಿತ ತಾರಾನಾಥರಾಯರು,** ಪ್ರೇಮಾಯತನ ತುಂಗಭದ್ರಾ

ಸಂಪಾದಕರು ಮತ್ತು ಪ್ರಕಾಶಕರು:

**ಶ್ರೀ. ಆಲೂರ ವೆಂಕಟರಾಯರು** ಬಿ. ಎಲ್‌ಎಲ್. ಬಿ.

ಧಾರವಾಡ

(ಧಾರವಾಡ ನವಜೀವನ ಸಂಘದ ಪರವಾಗಿ)

ಬೆಲೆ ೧-೪-೦] [೧೯೩೧

# ಸಂಪಾದಕರ ಮುನ್ನುಡಿ



ಇದು ನವಜೀವನ ಗ್ರಂಥಭಾಂಡಾರದ ಎರಡನೆಯ ಗ್ರಂಥ. ಇದರಲ್ಲಿ, ಪಂಡಿತ ತಾರಾನಾಥರಾಯರು 'ಧರ್ಮಸಂಭವ' ಅಥವಾ 'ಧರ್ಮದ ಮೂಲತತ್ತ್ವಗಳು' ಎಂಬ ವಿಷಯವನ್ನು ಸ್ವತಂತ್ರ ರೀತಿಯಿಂದ ವಿವೇಚಿಸಿರುವರು. ಪಂಡಿತ ತಾರಾನಾಥರಾಯರು ದೇಶದ ಈಗಿನ ತರುಣರಲ್ಲಿ ಸಾಮಾನ್ಯತಃ ಬೇರೂರಿದ ಹೊಸ ವಿಚಾರಗಳ ಸಮರ್ಥವಂತ ಪ್ರತಿನಿಧಿಗಳು. ಆದರಿಂದ, ತರುಣರಿಗೆ ಈ ಗ್ರಂಥವು ತಮ್ಮ ಮನದಲ್ಲಿಯ ಆಕ್ಷೇಪಗಳದೊಂದು ಕನ್ನಡಿಯೆಂದು ತೋರದಿರದು. ಇದರಲ್ಲಿ, ಹಳೆಯ ಧರ್ಮಾಭಿಮಾನಿಗಳ ಮೇಲೆ ಕಡುತರವಾದ ಟೀಕೆಯಿದ್ದರೂ, ತಮ್ಮ ದೋಷಗಳಾವವೆಂಬುದೂ ತಮ್ಮ ಮೇಲಿನ ಪರಮಾವಧಿ ಆಕ್ಷೇಪಗಳಾವವೆಂಬುದೂ ಅವರಿಗೆ ಗೊತ್ತಾಗುವದರಿಂದ, ಅವರಿಗೂ ಈ ಗ್ರಂಥವು ಪ್ರಯೋಜನಕಾರಿಯಾಗದಿರದು.

ಪಂಡಿತ ತಾರಾನಾಥರಾಯರು ಉತ್ಕೃಷ್ಟ ವಕ್ತೃಗಳು. ಅವರು ಈ ಗ್ರಂಥದಲ್ಲಿ ತಾವು ಮಾತಾಡಿದಂತೆಯೇ ಬರೆಯುವ ಶೈಲಿಯನ್ನು ಉಪಯೋಗಿಸಿರುವರು. ನಾವು ಅವರ ವಿಶಿಷ್ಟ ಬರಹಶೈಲಿಯಲ್ಲಾಗಲಿ ಅವರ ವಿಚಾರಮಂಡನದ ರೀತಿಯಲ್ಲಾಗಲಿ ಬದಲುಮಾಡದೆ, ಅವರ ಅಪ್ಪಣೆಯ ಮೇರೆಗೆ ಅಲ್ಲಲ್ಲಿ ಹೆಚ್ಚುಕಡಿಮೆಗಳನ್ನು ಮಾಡಿರುವೆವು.

ನವಜೀವನ ಗ್ರಂಥದ ಮೊದಲನೆಯ ಗ್ರಂಥವು ಹೊರಟು ೫-೬ ತಿಂಗಳುಗಳ ನಂತರ ಈ ಗ್ರಂಥ ಹೊರಡುವುದಕ್ಕೆ ಚಂದಾದಾರರಿಂದ ಪ್ರೋತ್ಸಾಹನದ ಅಭಾವವೇ ಕಾರಣ. (ಈ ಬಗ್ಗೆ ಕನ್ನಡಿಗರಲ್ಲಿ ಕೊನೆಯ ವಿಜ್ಞಾಪನೆಯೆಂಬ ಈ ಮುಂದೆ ಕೊಟ್ಟಿರುವ ಲೇಖವನ್ನೋದಿರಿ.) ನಮ್ಮ ಕೈಗಳು ಸೋತುಹೋದ ಕಾಲದಲ್ಲಿ **ನಮ್ಮ ಮಿತ್ರರಾದ**

**ಶ್ರೀ. ಗುರುರಾವ ಬೇವೂರ ಆಯ್. ಸಿ. ಎಸ್. ಪೋಸ್ಟಮಾಸ್ತರ ಜನರಲ್, ಮುಂಬಯಿ ಇಲಾಖೆ,** ಇವರು **ಈ ಗ್ರಂಥವನ್ನು ಮುದ್ರಿಸುವುದಕ್ಕೆ ಒಂದು ನೂರು ರೂಪಾಯಿ**ಗಳನ್ನು ಕಳುಹಿಸಿ ಕೊಟ್ಟು ನಮ್ಮ ಹೊಸ ಯೋಜನೆಗೆ ಸಹಾಯ ಮಾಡುವುದಕ್ಕೆ ಮೊದಲು ಮಾಡಿದ್ದರಿಂದ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸ್ವಲ್ಪವೇ ಸರಿ- ಅಲ್ಲದೆ ನಮ್ಮ ಅಡಚಣಿಗಳನ್ನು ಲಕ್ಷದಲ್ಲಿ ತಂದು **ಪಂಡಿತ ತಾರಾನಾಥರಾಯರು** ಗ್ರಂಥಬರಹದ ಸಲುವಾಗಿ ಅವರಿಗೆ ಸಲ್ಲತಕ್ಕ **೧೫೦ ರೂಪಾಯಿ**ಗಳನ್ನು ಬಿಟ್ಟು ಕೊಟ್ಟದ್ದರಿಂದ ಅವರ ಉಪಕಾರವನ್ನು ಎಷ್ಟೆಂತು ಸ್ಮರಿಸಬೇಕು? ಅದೇ ಮೇರೆಗೆ, ವಿಜಯ ಮುದ್ರಾಲಯದ ಪಾಲಕರಾದ **ಶ್ರೀ. ಹೊಸಕೇರಿ ಅಣ್ಣಾಚಾರ್ಯರು** ಈ ಕಾಲದಲ್ಲಿ ನಮಗೆ **ವಿಶೇಷ ಸೌಕರ್ಯ**ಗಳನ್ನು ಕೊಟ್ಟು ಸಹಾಯಮಾಡದಿದ್ದರೆ ಈ ಗ್ರಂಥವು ಬೇಗನೆ ಹೊರಡುತ್ತಿರಲಿಲ್ಲ. ದೇವರು ಮಿಕ್ಕವರಿಗೂ ಇದೇ ತರಹದಿಂದ ಅವರವರ ಕೈಲಾದ ಮಟ್ಟಿಗೆ ನಮಗೆ ಸಹಾಯಮಾಡಲು ಪ್ರೇರಿಸಿ ನಮ್ಮಿಂದ ಅಂತೂ ಇಂತೂ ಈ ಮಹಾಕಾರ್ಯವನ್ನು ನೆರವೇರಿಸಿಕೊಳ್ಳಲಿ ಎಂದು ಪ್ರಾರ್ಥಿಸುತ್ತೇವೆ.

ಧಾರವಾಡ
೧೨-೧೦-೩೧
ನವರಾತ್ರಿ ಪ್ರತಿಪದೆ

**ಆಲೂರ ವೆಂಕಟರಾಯ,**
ಸಂಪಾದಕ.

ಶ್ರೀ.



# ನವಜೀವನ ಗ್ರಂಥಭಾಂಡಾರ, ಸಾಧನಕೇರಿ, ಧಾರವಾಡ.

## ಕನ್ನಡಿಗರಲ್ಲಿ ಕೊನೆಯ ವಿಜ್ಞಾಪನೆ.



ಕರ್ನಾಟಕದ ದುರ್ದೈವವೋ ಪ್ರತಿಕೂಲ ಪರಿಸ್ಥಿತಿಯ ಬಿಗುವೋ ತಿಳಿಯಲೊಲ್ಲದು, ಕರ್ನಾಟಕತ್ವದ ಭಾವನೆಯು ಅಂಕುರಿತವಾಗಿ ೨೦-೨೫ ವರ್ಷಗಳಾಗಿ ಹೋಗಿದ್ದರೂ ಅದರ ಬೇರುಗಳು ಇನ್ನೂ ಸಾಕಷ್ಟು ಆಳವಾಗಿ ಇಳಿದಿರುವುದಿಲ್ಲ. ಕರ್ನಾಟಕದ ಕೂಗೇನೋ ಅನೇಕ ಕಡೆಗೆ ಕೇಳಿಬರುತ್ತಿದೆ. ಆದರೆ ಬರಿಯ ಕೂಗು ಸಾಲದು. ಕೂಗು ಜಾಗ್ರತಿಯ ಚಿನ್ಹ, ಸ್ವಾಭಿಮಾನದ ಕುರುಹು. ಅದನ್ನು ಕಡಿಮೆಮಾಡದೆ ಕರ್ನಾಟಕವು ದೊಡ್ಡ ದೊಡ್ಡ ವಿಧಾಯಕ ಕಾರ್ಯಗಳನ್ನು ಕೈಕೊಳ್ಳುವ ಕಾಲವು ಬಂದಿದೀಗ. ಲಘುವಾಙ್ಮಯ ಮೊದಲ್ಗೊಂಡು ಅತ್ಯಂತ ಉದಾತ್ತ ವಾಙ್ಮಯದ ವರೆಗೆ ಎಲ್ಲ ತರಹದ ವಾಙ್ಮಯವನ್ನು ಹುಟ್ಟಿಸುವ ಜನರು ಮುಂದೆ ಬರುವುದೂ ಅವರಿಗೆ ಆಯಾ ಪ್ರಮಾಣದಿಂದ ಪ್ರೋತ್ಸಾಹನ ಕೊಡುವದಕ್ಕೆ ಕನ್ನಡಿಗರು ಸಿದ್ಧರಾಗುವುದೂ ಈ ತರಹದ ವಿಧಾಯಕ ಕಾರ್ಯಗಳು. ಆದರೆ ಇಲ್ಲಿ ನೋಡಬೇಕು, ಪ್ರತಿಯೊಬ್ಬನೂ ರೋದನ ಧ್ವನಿಯನ್ನೇ ತೆಗೆಯುತ್ತಿರುವನು! ದೇಶದ ವಿಲಕ್ಷಣ ಪರಿಸ್ಥಿತಿಯೂ ಇದಕ್ಕೆ ಈಗ ಕೆಲ ಮಟ್ಟಿಗೆ ಕಾರಣವಾಗಿರಬಹುದು. ಆದರೆ ಪ್ರತಿಕೂಲ ಪರಿಸ್ಥಿತಿಯನ್ನು ಹಿಮ್ಮೆಟ್ಟಿಸುವ ಧೈರ್ಯವು ನಮ್ಮ ತರುಣರಲ್ಲಿ ಬೇಡವೆ? ಅಶಕ್ಯವಾಗಿ ತೋರುವುದನ್ನು ಶಕ್ಯವಾಗಿ ಮಾಡಿ ತೋರಿಸುವ ಉತ್ಸಾಹವು ಅವರಲ್ಲಿ ಇರಬೇಡವೆ?

ಪತ್ರಪತ್ರಿಕೆ, ಕಥೆಕವಿತೆಗಳು ಈಗಾಗಲೇ ವಾಚನಾಭಿರುಚಿಯನ್ನು ತಕ್ಕಮಟ್ಟಿಗೆ ಹುಟ್ಟಿಸಿರುವುದರಿಂದ ಉದಾತ್ತ ಗ್ರಂಥಮಾಲೆಯನ್ನು ಹುಟ್ಟಿಸುವುದಕ್ಕೆ ಪ್ರಾರಂಭಿಸಬೇಕೆಂಬ ಉದ್ದೇಶದಿಂದ ಈ ನವ

ಜೀವನ ಗ್ರಂಥಭಾಂಡಾರವನ್ನು ಎರಡು ವರ್ಷಗಳ ಹಿಂದೆ ಹೊರಡಿಸಿದೆವು. ಉತ್ಕೃಷ್ಟವಾದ ವಿಷಯಗಳ ಮೇಲೆ ಉತ್ಕೃಷ್ಟರಾದ ಲೇಖಕರಿಂದ ಉತ್ಕೃಷ್ಟವಾಗಿ ಗ್ರಂಥಗಳನ್ನು ಬರೆಯಿಸಿ ಉತ್ಕೃಷ್ಟವಾಗಿ ಮುದ್ರಿಸಿ ಪ್ರತಿವರ್ಷ ಆರೇ ಗ್ರಂಥಗಳಂತೆ ಪ್ರಕಟಿಸಿದರೆ ಕನಿಷ್ಠ ಐವತ್ತು ಗ್ರಂಥಗಳಾಗುವವರೆಗೆ ೧। ಕೋಟಿ ಜನಸಂಖ್ಯೆಯುಳ್ಳ ಕರ್ನಾಟಕದಲ್ಲಿ, ಜೀವಹಿಡಿಯುವ ಮಟ್ಟಿಗಾದರೂ ಚಂದಾದಾರರು ಸಿಕ್ಕಲಿಕ್ಕಿಲ್ಲವೆ, ಎಂದು ನಮ್ಮ ಹೆಮ್ಮೆ. ೨೦–೨೫ ವರ್ಷಗಳ ಹಿಂದೆ ಗ್ರಂಥಪ್ರಸಾರಕ ಮಂಡಲವನ್ನು ತೆಗೆದು ೨೦೦-೩೦೦ ಪುಟಗಳುಳ್ಳ ಉಚ್ಚಗ್ರಂಥಗಳನ್ನು ಪ್ರಕಟಿಸುವ ನಮ್ಮ ಪ್ರಯತ್ನವು ವಿಫಲವಾದುದನ್ನು ಲಕ್ಷದಲ್ಲಿ ತಂದು, ೧೧೦-೧೨೦ ಪುಟಗಳುಳ್ಳ ಗ್ರಂಥಗಳನ್ನಷ್ಟೇ ಬರೆಯಿಸಬೇಕೆಂದೂ, ಸಾಮಾನ್ಯ ವಾಚಕರಿಗೂ ಉದಾತ್ತ ವಿಷಯಗಳು ಆದಷ್ಟು ಸುಲಭವಾಗಿ ಬೋಧವಾಗುವಂತೆ ಮನೋರಂಜಕವಾಗಿ ಬರೆಯಿಸಬೇಕೆಂದೂ ಗೊತ್ತುಪಡಿಸಿದೆವು. ನಮ್ಮೀ ಯೋಜನೆಗೆ ಅನೇಕ ವಿದ್ವಜ್ಜನರ ಅನುಮೋದನವನ್ನೂ ಪಡೆದುಕೊಂಡೆವು. ಆದರೂ ಇನ್ನೂವರೆಗೆ ಜನರಿಂದ ಪ್ರೋತ್ಸಾಹನ ದೊರೆಯದ್ದರಿಂದ ನಮ್ಮ ಹೆಮ್ಮೆ ಇಳಿದಿದೆ. ಈ ಎರಡು ವರ್ಷ ಇದೊಂದೇ ಉದ್ಯೋಗದ ಬೆನ್ನು ಹತ್ತಿ, ಸತತವಾಗಿ ಕೆಲಸಮಾಡಿ ಉತ್ತಮವಾದ ಗ್ರಂಥಗಳನ್ನು ಸಂಗ್ರಹಿಸಿ, ವಾಚಕರಿಗೆ ಜ್ಞಾನದ ಇಚ್ಛಾಭೋಜನವನ್ನು ನೀಡಲಿಕ್ಕೆ ಸಿದ್ಧರಾಗಿದ್ದರೂ ಉಣ್ಣುವವರಿಲ್ಲ! ಇದಕ್ಕೆ ಉದಾಸೀನತೆಯೆನ್ನಬೇಕೋ, ನಿರಭಿಮಾನತೆಯನ್ನಬೇಕೋ ತಿಳಿಯದಾಗಿದೆ. ಕನಿಷ್ಠ **ಎರಡು ಸಾವಿರ ಚಂದಾದಾರರು ಕೂಡಿದರೆ ಮಾತ್ರವೇ ಇಂಥ ಗ್ರಂಥಗಳ ಖರ್ಚು** ಪೂರೈಸುತ್ತದೆಂಬುದನ್ನು ವಾಚಕರ ಮುಂದೆ ಖರ್ಚಿನ ವಿವರಗಳನ್ನಿಟ್ಟು, ಮುಂದೆ ಬಂದು ಸಹಾಯಮಾಡಬೇಕೆಂದು ನಾವು ಅನೇಕ ಸಲ ಪ್ರಾರ್ಥಿಸಿಕೊಂಡೆವು. ಲೇಖಕರೇನೋ ಅನೇಕರು ದೊರೆತಿರುವರು, ಮಿಕ್ಕವರೂ ದೊರೆಯಬಹುದೆಂಬ ಭರವಸೆಯೂ ಇದೆ. ಆದರೆ ಚಂದಾದಾರರು ಮಾತ್ರ ಮುಂದೆ ಬರಲಿಲ್ಲ. ಅವರಿಗೆ ಕನಿಕರ ಹುಟ್ಟಲಿಲ್ಲ. ಅವರ ಹೃದಯದಲ್ಲಿ ಸಹಾನುಭೂತಿಯ ದ್ರವವು ಒಡೆಯಲಿಲ್ಲ. ಅವರ ಮನಸ್ಸಿನಲ್ಲಿ ಅಭಿಮಾನದ ಹೊಳಪು ಮಿಂಚ

ಲಿಲ್ಲ. ಗ್ರಂಥಮಾಲೆಯು ನಿಂತುಹೋಗಿ, ಎರಡು ವರ್ಷ ಮಾಡಿದ ಶ್ರಮವೂ ನಾವು ವೆಚ್ಚಮಾಡಿದ ಹಣವೂ ಮಿತ್ರರ ಸಹಾಯವೂ ಎಲ್ಲವೂ ಎಲ್ಲಿ ಹಾಳಾಗಿಹೋಗುತ್ತದೆಯೋ ಎಂದು ಅಂಜಿಕೆ ಹುಟ್ಟಿತು. ಮುಂದೇನು ಮಾಡಬೇಕೆಂಬುದು ತೋಚದಾಯಿತು.

ಆದರೂ ಧೈರ್ಯಗೆಡದೆ ಪುನಃ ವಿಚಾರಮಾಡಿದೆವು. ೧೨-೧೫ ಗ್ರಂಥಗಳು ಹೊರಬಿದ್ದರೆ, ಅಷ್ಟರಲ್ಲಿ ಚಂದಾದಾರರಿಗೆ ಕರುಣ ಹುಟ್ಟಿ ಕಣ್ಣು ತೆಗೆಯಬಹುದೆಂದು ಯೋಚಿಸಿದೆವು. ಆದರೆ ಇಷ್ಟು ಗ್ರಂಥಗಳು ಹೊರಬೀಳಬೇಕಾದರೆ ೩-೪ ವರ್ಷಗಳಾದರೂ ಬೇಕು. ಅಲ್ಲಿಯವರೆಗೆ ಕಚೇರಿಯ ಖರ್ಚನ್ನು ನಡಿಸಿ ಗ್ರಂಥಗಳನ್ನು ಮುದ್ರಿಸಲಿಕ್ಕೆ ೧೦-೧೨ ಸಾವಿರ ರೂಪಾಯಿಗಳಾದರೂ ಬೇಕು. ನಮ್ಮ ಈಗಿನ ನಿರ್ಧನಿಕ ಸ್ಥಿತಿಯಲ್ಲಿ ಇಷ್ಟು ಹಣವನ್ನು ತರುವುದೆಲ್ಲಿಂದ? ನಮ್ಮೀ ವಿಚಾರ ವನ್ನು ನಾವು ಬಾಯಿಹಾಕಿದ ಕೂಡಲೆ ಒಪ್ಪುವಂಥ ನಮ್ಮ ಕೆಲವು ಮಿತ್ರರ ಮುಂದಿಟ್ಟೆವು. ಅವರು ನಮ್ಮ ಮೇಲಿನ ಪ್ರೇಮದಿಂದ, ಹಣದ ಸಹಾಯವನ್ನು ಮಾಡುವೆವೆಂದು ಹೇಳಿ, ಧೈರ್ಯಬಿಡದೆ ಮುಂದೆ ಹೆಜ್ಜೆ ಇಡುವುದಕ್ಕೆ ಪ್ರೋತ್ಸಾಹಿಸಿದರು. ಇನ್ನೂ ಕೆಲವು ಮಿತ್ರರು ಸಹಾಯ ಮಾಡುವವರಿದ್ದಾರೆ. ಆದಕಾರಣ ಈಗ ಪುನಃ ಮುಂದೆ ಹೆಜ್ಜೆ ಇಡಹತ್ತಿದ್ದೇವೆ. ಕನ್ನಡಿಗರೆಲ್ಲರೂ ಅವರ ಅನುಕರ ಣವನ್ನು ಮಾಡಿ, ನಮಗೆ ಕೈಗೊಟ್ಟು ಅಲ್ಪಶಕ್ತಿಯುಳ್ಳ ನಮ್ಮಿಂದ ಈ ಮಹಾಕಾರ್ಯವನ್ನು ಕೊನೆಗಾಣಿಸಿಕೊಳ್ಳಬೇಕೆಂದು ಪ್ರಾರ್ಥನೆ.

ಆದರೆ ಗ್ರಂಥಭಾಂಡಾರವು ನಿಜವಾಗಿ ಯಶಸ್ವಿಯಾಗಬೇಕಾದರೆ ಯಾವಾಗಲೂ ಚಂದಾದಾರರ ಮೇಲೆಯೇ ಅವಲಂಬಿಸಬೇಕಲ್ಲವೆ? ಆದ ಕಾರಣ ಸಾಮಾನ್ಯ ಜನತೆಯೆಲ್ಲವೂ ತಮ್ಮ ಯೋಗ್ಯತೆಯ ಮೇರೆಗೆ ಆಶ್ರಯದಾತರಾಗಿಯಾಗಲಿ, ಪೋಷಕರಾಗಿಯಾಗಲಿ ಅಥವಾ ಚಂದಾ ದಾರರಾಗಿಯಾಗಲಿ ಸಹಾಯ ಮಾಡುವುದಕ್ಕೆ ಮುಂದೆ ಬರುತ್ತ ಹೋ ದರೆ ಮಾತ್ರವೇ ಈಗ ನಮ್ಮ ಮಿತ್ರರು ನಮ್ಮ ಸಲುವಾಗಿ ಮಾಡಿದ ಮತ್ತು ಮಾಡುವ ಸಹಾಯದ ಲಾಭವು ಕನ್ನಡಿಗರಿಗೆ ದೊರೆಯುತ್ತ ದೆಂಬುದನ್ನು ಮರೆಯಬಾರದು. ಮೊದಲನೆಯ ಗ್ರಂಥದ ೨೦೦೦

ಪ್ರತಿಗಳನ್ನು ಮುದ್ರಿಸಿ ಎರಡು ಆವೃತ್ತಿಗಳನ್ನು ತೆಗೆದಿದ್ದೆವು. ಒಂದು ಸುಂದರತರ ಆವೃತ್ತಿ, ಎರಡನೆಯದು, ಸುಂದರ ಆವೃತ್ತಿ. ಆದರೆ, ಈಗ ಭಿಕ್ಷೆ ಬೇಡಿ ಕೆಲಸ ಸಾಗಿಸಬೇಕಾಗಿರುವುದರಿಂದ ಸುಂದರತರ ವಾದ ಆವೃತ್ತಿಯೊಂದನ್ನೇ ತೆಗೆದು ಒಂದೇ ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಬೇಕಾಗಿರುವುದು. ೨೦೦೦ ಚಂದಾದಾರರು ದೊರೆತರೆ ಮಾತ್ರ ಖರ್ಚು ಪೂರೈಸುತ್ತದೆಂದು ಮೇಲೆ ಹೇಳಿದೆವಷ್ಟೆ. ೧೦೦೦ ಪ್ರತಿಗಳನ್ನು ತೆಗೆಯುವುದರಿಂದ ಆ ಪ್ರಮಾಣದಿಂದ ನಿರರ್ಥಕವಾಗಿ ಖರ್ಚು ಹೆಚ್ಚಿಗೆ ಬರುತ್ತದೆ. ಈ ನಮ್ಮ ಸಂಕಟಗಳನ್ನು ಲಕ್ಷ ದಲ್ಲಿ ತಂದು ಆದಷ್ಟು ತೀವ್ರ ಚಂದಾದಾರರು ಮುಂದೆ ಬಂದರೆ ಕರ್ನಾಟಕಕ್ಕೂ ಕಲ್ಯಾಣವಾಗುವುದು, ನಮಗೂ ಸಮಾಧಾನವಾ ಗುವುದು.

ನಮ್ಮ ತರುಣ ಉಜ್ವಲ ಕನ್ನಡಿಗರಾದ ಮಂಗಮಟದವರೂ ನಮ್ಮ ಮಿತ್ರರಾದ ಶ್ರೀ. ಶಿವರುದ್ರಪ್ಪಾ ಅಡ್ಡಣಗಿ ಬಿ. ಎ. ಎಲ್. ಎಲ್. ಬಿ. ವಕೀಲ ಬೆಳಗಾಂವಿ, ಶ್ರೀ. ನಾರಾಯಣರಾವ ಕುಲ ಕರ್ಣಿ ಎಂ. ಎ. ಎಲ್. ಎಲ್. ಬಿ. ವಕೀಲ ಬೈಲಹೊಂಗಲ ಇವರೂ ಎಲ್ಲಕ್ಕೂ ಮುಂಚೆ ಮುಂದೆ ಬಂದು, ಸಹಾಯಮಾಡುವ ಆಶ್ವಾ ಸನ ಕೊಟ್ಟರು. ನಮ್ಮ ಅನೇಕ ಮಿತ್ರರೂ ಅಭಿ ಮಾನಿಗಳೂ ಈ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡುವು ದರಲ್ಲಿ ನಮಗೆ ಸಹಾಯ ಮಾಡುವ ಆಶ್ವಾಸನವನ್ನು ಕೊಡುತ್ತಿರು ವರು ಮತ್ತು ನಮ್ಮ ಸಲುವಾಗಿ ಚಂದಾದಾರರನ್ನು ಕೂಡಿಸುತ್ತಿರು ವರು. ಉಜ್ವಲ ಕನ್ನಡಿಗರೂ ನಮ್ಮ ತರುಣ ಮಿತ್ರರೂ ಆದ ಧಾರವಾಡದ ಮಂಗಮಟದ ಸದಸ್ಯರೆಲ್ಲರೂ, ಧಾರವಾಡದ ಶ್ರೀ. ಜಮುಖಂಡಿ ಗುರುರಾವ ಎಂ. ಎ. ಎಲ್. ಎಲ್. ಬಿ. ವಕೀಲ ಮತ್ತು ಹಿಂದಕ್ಕೆ ನಾವು ವಕೀಲಿ ಮಾಡುವ ಕಾಲಕ್ಕೆ ನಮ್ಮೊಡನೆ ಪಾಲುಗಾರರಾಗಿದ್ದ ಶ್ರೀ. ಮುದವೇಡೇಕರ ವೆಂಕಟರಾವ ವಕೀಲ ಇವರು, ಧಾರವಾಡದ ಶ್ರೀ. ರಾಘವೇಂದ್ರರಾವ ಮುತಾಲಿಕ ದೇಸಾಯಿ ಬಿ. ಎಜಿ. ಇವರು ಹುಬ್ಬಳ್ಳಿಯ ಶ್ರೀ. ವಾಳವೇಕರ

ಗುರುರಾವ ಬಿ. ಎ. ಎಲ್. ಎಲ್. ಬಿ. ವಕೀಲ ಮತ್ತು ಶ್ರೀ. ಸಿದ್ಧರಾಮಪ್ಪಾ ಪಾವಟೆ ಬಿ. ಎ. ಎಲ್. ಎಲ್. ಬಿ. ವಕೀಲ ಇವರು ಬೆಳಗಾಂವಿಯ ಶ್ರೀ. ಶಿವರುದ್ರಪ್ಪಾ ಅಷ್ಟಣಗಿ ಬಿ. ಎ. ಎಲ್. ಎಲ್. ಬಿ. ವಕೀಲ ಇವರು ಬೈಲಹೊಂಗಲದ ಶ್ರೀ. ನಾರಾಯಣರಾವ ಕುಲಕರ್ಣಿ ಎಂ. ಎ. ಎಲ್. ಎಲ್. ಬಿ. ವಕೀಲ ಇವರು, ಮೈಸೂರಿನ ಪ್ರೊಫೆಸರ ಎಚ್. ಎನ್. ರಾಘವೇಂದ್ರಾಚಾರ್ಯ ಎಂ. ಎ. ಇವರು, ಹಾಸನದ ಶ್ರೀ. ಟಿ. ಎಲ್. ಶ್ರೀನಿವಾಸಾಚಾರ್ಯ ಬಿ. ಎ. ಎಲ್. ಎಲ್. ಬಿ. ಇವರು, ಹೈದ್ರಾಬಾದಿನ ಡಾ। ಜಿ. ಎಸ್. ಮೇಲುಕೋಟೆ ಇವರು, ಕಲಬುರ್ಗಿಯ ಶ್ರೀ. ಕಪಟ್ರಾಳ ಕೃಷ್ಣರಾವ ವಕೀಲರು ಮತ್ತು ಶ್ರೀ. ಅಶ್ವತ್ಥರಾವ ಬಿ. ಎ. ಬಿ. ಎಲ್. ಹಾಯಕೋರ್ಟ ವಕೀಲ ಇವರು ಕೊಪ್ಪಗ್ರಾಮದ ಶ್ರೀ. ರಾಮಸ್ವಾಮಿ ಅಯ್ಯಂಗಾರ ಇವರು. ಮಡಿಕೇರಿಯ ಎಂ. ಸಿದ್ಧಲಿಂಗಪ್ಪನವರು, ಬೆಂಗಳೂರಿನ ಶ್ರೀ. ಎಂ. ರಾಮರಾವ ಇವರು ಕಲಕೇರಿಯ ಶ್ರೀ. ಮಡಿವಾಳಪ್ಪಾ ಸಾಸನೂರ ಇವರು-ಇವರೇ ಮುಂತಾದವರು ನಮ್ಮ ಸಲುವಾಗಿ ಅವಿಶ್ರಾಂತ ಪರಿಶ್ರಮಪಟ್ಟು ಪೋಷಕರ ಮತ್ತು ಚಂದಾದಾರರ ಸಂಖ್ಯೆಯನ್ನು ಬೆಳಿಸಲು ಪ್ರಯತ್ನಿಸಹತ್ತಿರುವರು. ಅವರ ಅನುಕರಣವನ್ನು ಮಾಡಿ, ಮತ್ತೆ ಅನೇಕ ನಮ್ಮ ಅಭಿಮಾನಿಗಳೂ ಆಯಾ ಸ್ಥಳಗಳಲ್ಲಿರುವ ಕನ್ನಡ ಅಭಿಮಾನಿಗಳೂ ಹಲಕೆಲವು ಚಂದಾದಾರರನ್ನು ದೊರಕಿಸಿಕೊಟ್ಟು ಸಹಾಯಮಾಡುವರೆಂದು ಆಶಿಸುತ್ತೇವೆ. ಈ ಗ್ರಂಥದ ಕೊನೆಗೆ ಪರಿಶಿಷ್ಟದಲ್ಲಿ ಯಾವತ್ತೂ ತೆರಹದ ಚಂದಾದಾರರ ಹೆಸರುಗಳನ್ನು ಕೊಟ್ಟಿದೆ.

ಮಹಾರಾಷ್ಟ್ರದಲ್ಲಿ ಇದೇ ತರಹದ ಗ್ರಂಥಮಾಲೆಯನ್ನು ತೆಗೆಯುವ ಕಾರ್ಯವು ನಮ್ಮಲ್ಲಿಗಿಂತ ಬಹಳ ಹಿಂದಿನಿಂದ ಪ್ರಾರಂಭವಾಯಿತು. ಅವರು ತಮ್ಮ ಪರಿಸ್ಥಿತಿಗೆ ತಕ್ಕಂತೆ ನಮಗಿಂತ ದೊಡ್ಡದಾದ ಅಂದರೆ ೨೦೦-೨೫೦ ಪುಟಗಳುಳ್ಳ ಗ್ರಂಥಮಾಲೆಯನ್ನು ಹೊರಡಿಸಿರುವರು. ಇಷ್ಟರಲ್ಲಿಯೇ ಅವರ ಕಲ್ಪನೆಯು ಯಶಸ್ವಿಯಾಗಿ

ಈಗಾಗಲೆ ಅವರು ಎರಡು ಗ್ರಂಥಗಳನ್ನು ಹೊರಡಿಸಿರುವರು. ನಾವಾದರೋ, ಉದಾತ್ತ ಗ್ರಂಥಮಾಲೆಯ ಓನಾಮಾ ಪ್ರಾರಂಭಿಸಿದ್ದರೂ ಪ್ರೋತ್ಸಾಹನವಿಲ್ಲದೆ ಕೊರಗುತ್ತಿರುವೆವು. ನೆರೆಹೊರೆಯವರನ್ನು ನೋಡಿಯಾದರೂ ನಮ್ಮ ಜನರು ಸ್ವಾಭಿಮಾನವನ್ನು ಜಾಗ್ರತಪಡಿಸಿಕೊಳ್ಳಬಾರದೋ?

ಈ ಗ್ರಂಥಭಾಂಡಾರವು ಹೊರಟ ಕೂಡಲೆ ಅಭಿಮಾನದಿಂದ ಮೊದಲಿಗೆ ಚಂದಾದಾರರಾದವರ ಉಪಕಾರವನ್ನು ಸ್ಮರಿಸುವುದು ಅವಶ್ಯ. ಅಲ್ಲದೆ ಮೊದಲನೆಯ ಗ್ರಂಥ ಹೊರಟು ೫-೬ ತಿಂಗಳವರೆಗೆ ಎರಡನೆಯ ಗ್ರಂಥವು ಹೊರಡದಿದ್ದುದಕ್ಕಾಗಿ ನಾವು ಅವರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ನಮ್ಮ ಸಂಕಟಗಳನ್ನು ಲಕ್ಷದಲ್ಲಿ ತಂದು ಅವರು ನಮ್ಮನ್ನು ಕ್ಷಮಿಸುವುದಲ್ಲದೆ, ನಮಗೆ ಮತ್ತೆ ಚಂದಾದಾರರನ್ನು ದೊರಕಿಸಿ ಸಹಾಯಮಾಡುವರೆಂದು ನಂಬುತ್ತೇವೆ.

ಇದ್ದ ಸ್ಥಿತಿಯನ್ನು ಇದ್ದಕ್ಕಿದ್ದಂತೆ ಕನ್ನಡಿಗರ ಮುಂದೆ ಇಟ್ಟಿರುವೆವು. ಗಾಡಿಯನ್ನು ಮುಂದಕ್ಕೆ ನೂಕಲಿಕ್ಕಂತೂ ಪುನಃ ಪ್ರಾರಂಭಿಸಿರುವೆವು. ಅದು ನಡುವೆ ನಿಲ್ಲದಂತೆ ಮಾಡುವುದು ಬಿಡುವುದು ಕನ್ನಡಿಗರನ್ನು ಕೂಡಿದೆ. ಆದರೆ ಒಂದು ಮಾತನ್ನು ಮಾತ್ರ ಸ್ಪಷ್ಟವಾಗಿ ಹೇಳಿಡುತ್ತೇವೆ. ಅದೇನೆಂದರೆ, ಹಣಕೊಟ್ಟವರ ಋಣದಲ್ಲಿ ನಾವು ಎಂದೂ ಹೋಗುವುದಿಲ್ಲವೆಂಬುದು. ಕನ್ನಡಿಗರೇ ನಮ್ಮನ್ನು ತೇಲಿಸುವಿರೋ ಮುಳುಗಿಸುವಿರೊ?

———

# ನವಜೀವನ ಗ್ರಂಥಭಾಂಡಾರ ಸಾಧನಕೇರಿ, ಧಾರವಾಡ.

**[ಈ ಗ್ರಂಥಗಳು ಶಾಲೆಗಳಿಗಾಗಿ ಮೈಸೂರ ಸರಕಾರದವರಿಂದ ಮಂಜೂರಮಾಡಲ್ಪಟ್ಟಿವೆ.]**

## ಚಂದಾದಾರರ ವರ್ಗಗಳು.

(ಸುಂದರತರ ಆವೃತ್ತಿಯನ್ನೇ ಬಹುಜನರು ಬೇಡುತ್ತಿರುವುದರಿಂದ, ಇನ್ನು ಮುಂದೆ ಅದೊಂದನ್ನೇ ತೆಗೆಯುವೆವೆಂಬದನ್ನು ಲಕ್ಷದಲ್ಲಿಡಬೇಕು)

(೧) **೧೦೦** ಅಥವಾ ಹೆಚ್ಚಿಗೆ ರೂಪಾಯಿಗಳನ್ನು ಕೊಡುವವರು **ಆಶ್ರಯದಾತರು**

(ಒಂದೊಂದು ಗ್ರಂಥದ ಪ್ರಸ್ತಾವನೆಯಲ್ಲಿ ಇವರ ಒಬ್ಬೊಬ್ಬರ ಹೆಸರು ಕಾಣಿಸಲ್ಪಡುವುದು)

(೨) ಆರು ಗ್ರಂಥಗಳಿಗೆ ೧೦ ರೂಪಾಯಿಗಳನ್ನು ಕೊಡುವವರು **ಪೋಷಕರು**

(ಇವರ ಹೆಸರುಗಳು ಪ್ರತಿಯೊಂದು ಗ್ರಂಥದ ಕೊನೆಗೆ ಮುದ್ರಿಸಲ್ಪಡುವವು.)

(೩) ಆರು ಗ್ರಂಥಗಳಿಗೆ ೫-೮-೦ ಕೊಡುವವರು 'ಅ' ವರ್ಗದ ಚಂದಾದಾರರು

(೪) ಮುಂಗಡ ಒಂದು ರೂಪಾಯಿಯನ್ನು ತುಂಬಿ ಯಾವತ್ತು ಗ್ರಂಥಗಳನ್ನು ಕೊಳ್ಳಲೊಪ್ಪಿದವರು 'ಬ' ವರ್ಗದ ಚಂದಾದಾರರು. ಇವರಿಗೆ ಪ್ರತಿಯೊಂದು ಗ್ರಂಥವು ಒಂದು ರೂಪಾಯಿ+ಅಂಚೇ ವೆಚ್ಚಕ್ಕೆ ವ್ಹಿ. ಪಿ. ಯಿಂದ ರವಾನಿಸಲ್ಪಡುವುದು. ಇವರ ಹೆಸರುಗಳನ್ನು ಗ್ರಂಥದ ಕೊನೆಗೆ ಆದಾಗ ಕೊಡುವೆವು.

(ವರ್ಷಕ್ಕೆ ಬಹುಶಃ ಆರು ಗ್ರಂಥಗಳನ್ನು ಹೊರಡಿಸುವ ಸಂಕಲ್ಪವಿದೆ.)

ಎಲ್ಲರಿಗೂ ತಮ್ಮ ತಮ್ಮ ಗ್ರಂಥಗಳ ಅಂಚೆವೆಚ್ಚವನ್ನು ತಾವೇ ಸಹಿಸಬೇಕಾಗುವುದು. ಚಂದಾದಾರರ ಅನುಕೂಲತೆಯಂತೆ ಗ್ರಂಥಗಳನ್ನು ಬುಕ್‌ಪೋಸ್ಟಿನ ಮೂಲಕವಾಗಿ ಅಥವಾ ರಜಿಸ್ಟರ ಬುಕ್‌ಪೋಸ್ಟಿನ ಮೂಲಕವಾಗಿ ಕಳುಹಿಸಬೇಕಾಗುವುದರಿಂದಲೂ ಪೋಸ್ಟಿನ ದರಗಳು ದಿನದಿನಕ್ಕೆ ಬದಲಾಗುತ್ತಿರುವುದರಿಂದಲೂ ಒಟ್ಟು ಇಂತಿಷ್ಟೆ ಅಂಚೇ ವೆಚ್ಚ ತಗಲುವುದೆಂಬುದನ್ನು ಈಗಲೇ ಹೇಳಲಾಗುವುದಿಲ್ಲ. ಆದುದರಿಂದ, ಅದನ್ನು ಕೊನೆಯ ಗ್ರಂಥದೊಡನೆ ವಸೂಲಮಾಡಲಾಗುವುದು.

ಒಂದೇ ಊರಲ್ಲಿ ೫-೬ ಜನ ಚಂದಾದಾರರಿದ್ದಲ್ಲಿ ಒಬ್ಬರ ಹೆಸರಿನಿಂದ ಆ ಚಂದಾದಾರರ ಪ್ರತಿಗಳನ್ನು ರಜಿಸ್ಟರ ಬುಕ್‌ಪೋಸ್ಟಿನಿಂದ ಕಳುಹಿಸುವ ವ್ಯವಸ್ಥೆಯಾದರೆ ಬಹಳ ಅಂಚೇ ವೆಚ್ಚ ಉಳಿಯುವದು. ಅಥವಾ ತಮ್ಮ, ಒಂದೊಂದೇ ಪ್ರತಿಯನ್ನು ತರಿಸಿಕೊಳ್ಳದೆ ಒಮ್ಮೆಲೆ ಹೆಚ್ಚಿಗೆ ಪ್ರತಿಗಳನ್ನು ತರಿಸಿಕೊಂಡರೂ ಅಂಚೇ ವೆಚ್ಚ ಉಳಿಯುವದು. ಚಂದಾದಾರರು ಇದರ ವಿಚಾರವನ್ನು ಮಾಡಬೇಕು. ಅರ್ಥಾತ್ ಬುಕ್‌ಪೋಸ್ಟಿನಿಂದ ತರಿಸಿಕೊಂಡರೆ ನಡುವೆ ಪ್ರತಿಗಳು ಪೋಸ್ಟಿನಲ್ಲಿ ಕಳೆದುಹೋದುದಕ್ಕೆ ನಾವು ಜವಾಬದಾರರಲ್ಲ.

## ಕೈಯಲ್ಲಿರುವ ಮುಂದಿನ ಗ್ರಂಥಗಳು.

(೧) ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು- (ಇದು ಈಗ ಅಚ್ಚಿಗೆ ಹೋಗಿದೆ.) ಶ್ರೀ. ವಿಷ್ಣು ಹರಿ ಒಡೇರ ಎಂ. ಎ. ಎಲ್. ಎಲ್. ಬಿ.

(೨) ಹಿಂದುಸ್ಥಾನದ ಆರ್ಥಿಕ ಅವನತಿ- ಶ್ರೀ. ಗುರುರಾವ ವಾಳವೇಕರ ಬಿ. ಎ. ಎಲ್. ಎಲ್. ಬಿ.

(೩) ಖಾದೀಶಾಸ್ತ್ರ- ಶ್ರೀ. ಮಂಜಪ್ಪಾ ಹರ್ಡೇಕರ

(೪) ಶಾರದೆಯ ಸಂಸಾರ ಅಥವಾ ಭಾಷಾಶಾಸ್ತ್ರ- ಪ್ರೊ. ಆರ್. ವ್ಹಿ. ಜಹಾಗೀರದಾರ ಎಂ. ಎ. (ಲಂಡನ.)

ಅಚ್ಚಾದ **ಮೊದಲಿನ ಗ್ರಂಥ:-** ಆಕಾಶದೊಳಗಿನ ಅದ್ಭುತ

ಚಮತ್ಕಾರಗಳು. ಗ್ರಂಥಕರ್ತ:- ಪ್ರೊ. ಟಿ. ಎಮ್. ಪಾಟೀಲ ಎಂ. ಎ. ಧಾರವಾಡ. ಒಟ್ಟು ಪುಟ ೧೧೨ ಬಿಡಿ ಪ್ರತಿ ಬೆಲೆ ೧-೨-೦

**ಎರಡನೆಯ ಗ್ರಂಥ:-** ಧರ್ಮಸಂಭವ ಅಥವಾ ಧರ್ಮದ ಮೂಲತತ್ವಗಳು:- ಪಂಡಿತ ತಾರಾನಾಥರಾಯರು ಒಟ್ಟು ಪುಟ ೧೫೦ ಬಿಡಿ ಪ್ರತಿ ಬೆಲೆ ೧-೪-೦

## ಗ್ರಂಥಗಳ ವಿವರ.

| ಹೆಸರು | ವಿಷಯ |
|---|---|
| ೧ ಶ್ರೀ. ಎಸ್. ಎಸ್. ಸುಬ್ಬರಾವ ಎಂ. ಎ. ಡಿರೆಕ್ಟರ ಜನರಲ್ ಆಫ್ ಎಜ್ಯುಕೇಶನ್, ಮೈಸೂರ | ೧ ಅರ್ಥಶಾಸ್ತ್ರ<br>೨ ಯುರೋಪ ಖಂಡದ ಇತಿಹಾಸ |
| ೨ ಶ್ರೀ. ವಿನಾಯಕರಾವ ಜೋಶಿ. ಬಿ. ಎ. ರಿಟಾಯರ್ಡ ಎಜ್ಯುಕೇಶನಲ್ ಇನ್ಸ್ಪೆಕ್ಟರ ಧಾರವಾಡ | ೩ ಶಿಕ್ಷಣದ ಮೂಲ ತತ್ವಗಳು |
| ೩ ಡಾ. ಮುಪ್ಪಣ್ಣಾ ತುಮ್ಮಿನಕಟ್ಟಿ ಎಂ. ಎಸ್. ಸಿ. ಪಿ. (ಇಲಿನಾಯ ಅಮೇರಿಕಾ), | ೪ ರಸಾಯನಶಾಸ್ತ್ರ |
| ೪ ರಾವಸಾಹೇಬ ಫಕೀರಪ್ಪಾ ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಸಂಪಾದಕ ನವಕರ್ನಾಟಕ, ವಿಜಾಪೂರ. | ೫ ವೀರಶೈವಸರ್ವಸ್ವ |
| ೫ ಶ್ರೀ. ಬಿ. ರಾಮರಾವ ಎಂ. ಎ. ಎಲ್ ಎಲ್, ಬಿ. | ೬ ಬೌದ್ಧಯುಗ |
| ೬ ಶ್ರೀ. ಸಿದ್ಧರಾಮಪ್ಪಾ ಪಾವಟೆ ಬಿ. ಎ. ಎಲ್ ಎಲ್. ಬಿ. | ೭ ವೀರಶೈವ ಧರ್ಮ<br>೯ ಆರೋಗ್ಯಶಾಸ್ತ್ರ |
| ೮ ಶ್ರೀ. ಮಂಜಪ್ಪಾ ಹರ್ಡೇಕರ ವೀರಶೈವ ವಿದ್ಯಾಲಯ | ೧೦ ಖಾದೀಶಾಸ್ತ್ರ |
| ೯ ಶ್ರೀ. ಗುರುರಾವ ವಾಳವೇಕರ ಬಿ. ಎ. ಎಲ್ ಎಲ್. ಬಿ. | ೧೧ ಹಿಂದುಸ್ಥಾನದ ಆರ್ಥಿಕ ಅವನತಿ |

| | |
|---|---|
| ೧೦ ಶ್ರೀ. ಸಿ. ಕೆ. ವೆಂಕಟರಾಮಯ್ಯ ಎಂ. ಎ. ಎಲ್ ಎಲ್, ಬಿ. ಮೈಸೂರ | ೧೨ ಆರ್ಯರ ಆರ್ಥಿಕ ಜೀವನ<br>೧೩ ಆರ್ಯರ ಶಿಕ್ಷಣ ಪದ್ಧತಿ |
| ೧೧ ಪ್ರೊ॥ ಆರ್. ವ್ಹಿ. ಜಹಾಗೀರದಾರ, ಎಂ. ಎ. (ಲಂಡನ) ಕರ್ನಾಟಕ ಕಾಲೇಜ ಧಾರವಾಡ | ೧೪ ಭಾಷಾಶಾಸ್ತ್ರ<br>೧೫ ಜಗತ್ತಿನ ಅರ್ವಾಚೀನ ರಾಜ್ಯಪದ್ಧತಿ |
| ೧೨ ಶ್ರೀ. ವಿಷ್ಣು ಹರಿ ಒಡೇರ, ಎಂ. ಎ. ಎಲ್ ಎಲ್. ಬಿ ಚಿಕ್ಕೋಡಿ | ೧೬ ಹಿಂದುಸ್ಥಾನದ ಪ್ರಾಚೀನ ರಾಜ್ಯ [ಪದ್ಧತಿ<br>೧೭ ಹಿಂದುಸ್ಥಾನದ ಸಂಸ್ಕೃತಿ |
| ೧೩ ಶ್ರೀ. ಮಹಾಬಲ ಶಂಕರ ಹೆಗಡೆ, ಎಂ. ಎ. ಎಲ್ ಎಲ್. ಬಿ. | ೧೮ ಸ್ಮೃತಿಗಳು |
| ೧೪ ಶ್ರೀ. ಬೇಂದ್ರೆ ದತ್ತರಾಯರು ಬಿ. ಎ. | ೧೯ ಹಾಸ್ಯ-ವಿನೋದ |
| ೧೫ ಪ್ರೊ॥. ತಿರುಮಲರಾವ ಪಾಟೀಲ ಎಂ. ಎ. ಕರ್ನಾಟಕ ಕಾಲೇಜ ಧಾರವಾಡ | ೨೦ ಆಕಾಶದೊಳಗಿನ ಅದ್ಭುತ ಚಮತ್ಕಾರಗಳು |
| ೧೬ ಶ್ರೀ. ಎಂ. ಎ. ದೊರೆಸ್ವಾಮಿ ಅಯ್ಯಂಗಾರ ಎಂ. ಎ. ಬಿ. ಎಲ್. | ೨೧ ಏಶಿಯಾ ಖಂಡದ ಜಾಗ್ರತಿ |
| ೧೭ ಶ್ರೀ. ದೇವಡು ನರಸಿಂಹಶಾಸ್ತ್ರಿ ಎಂ. ಎ. ಬಿ. ಎಲ್. | ೨೨ ವೇದಗಳು |
| ೧೮ ಶ್ರೀ. ಎನ್. ಕಸ್ತೂರಿ ಎಂ. ಎ. ಬಿ. ಟಿ. ಇಂಟರ ಮಿಜಿಯೇಟ ಕಾಲೇಜ ಮೈಸೂರ | ೨೩ ವಿಶಾಲ ಭಾರತ |
| ೧೯ ಶ್ರೀ. ಆರ್. ರಾಮರಾವ ಆಸಿಸ್ಟಂಟ ಡೈರೆಕ್ಟರ ಆಫ್ ದಿ ಆರ್ಕಯಾಲಜಿ ಮೈಸೂರ | ೨೪ ಕರ್ನಾಟಕದ ಧರ್ಮ-ಸಂಸ್ಕೃತಿಗಳು |

| | |
|---|---|
| ೨೦ ಶ್ರೀ. ಬಿ. ತಿರುಮಲಾಚಾರ್ಯ ಇಂಟರಮಿಜಿಯೇಟ್ ಕಾಲೇಜ ಮೈಸೂರ | ೨೫ ಪ್ರಾಣಿಶಾಸ್ತ್ರ |
| ೨೧ ಶ್ರೀ. ಎಂ. ವ್ಹಿ. ಶ್ರೀದತ್ತ ಶರ್ಮ ಎಂ. ಎ. ಮೈಸೂರ | ೨೬ ವೇದಕಾಲದ ಹಿಂದುಸ್ಥಾನ<br>೨೭ ಕರ್ನಾಟಕದಶಿಲ್ಪಕಲೆ |
| ೨೨ ಶ್ರೀ. ಎಂ. ಬಿ. ಟಿ. ನಾರಾಯಣ ಎಲೆಕ್ಟ್ರಿಕಲ್ ಎಂಜಿನಿಯರ ಗವ್ಹರ್ನಮೆಂಟ ಟ್ರನ್ಸಫಾರ್ಮರ ಹೌಸ ಚಾಂಪಿಯನ್ ರೀಫ್ಸ, ಕೋಲಾರ ಗೋಲ್ಡ ಫೀಲ್ಡ್ಸ | ೨೮ ವಿದ್ಯುತ್ ಶಾಸ್ತ್ರ |
| ೨೩ ಶ್ರೀ. ವಿದ್ವಾನ್. ಎಚ್. ಎನ್. ರಾಘವೇಂದ್ರಾಚಾರ್ಯ ಎಂ. ಎ. | ೨೯ ದರ್ಶನಗಳು |
| ೨೪ ಶ್ರೀ. ಶಾಮರಾವ ತಟ್ಟಿ, ಬಿ. ಎ. ಧಾರವಾಡ, ಶ್ರೀ. ಸಂಗೀತ ವಿದ್ವಾನ್ ಹುಲಗೂರ ಕೃಷ್ಣಾಚಾರ್ಯ | ೩೦ ಸಂಗೀತಶಾಸ್ತ್ರ |
| ೨೫ ಎಂ. ವೆಂಕೋಚಾಚಾರ್ಯ ಬಿ. ಎ. ಎಲ್. ಟಿ. | ೩೧ ಮಾನಸಶಾಸ್ತ್ರ |
| ೨೬ ಮೂರ್ತಿರಾವ ಪ್ರೊ. ಮಹಾರಾಜಾ ಕಾಲೇಜ ಮೈಸೂರ | ೩೨ ಜಗತ್ತಿನ ಮಹಾಪುರುಷರು |

೧ ಇದಲ್ಲದೆ ಇನ್ನೂ ಅನೇಕ ಪ್ರೊಫೆಸರರೂ ವಿದ್ವಾಂಸರೂ ಗ್ರಂಥಗಳನ್ನು ಬರೆದುಕೊಡಲು ಒಪ್ಪಿರುವರು.

೨ ಗ್ರಂಥಗಳು ಸಿದ್ಧವಾಗಿ ಕೈಗೆ ಬಂದಂತೆ ಮುದ್ರಿಸಬೇಕಾಗುವುದರಿಂದ ಇದೇ ಕ್ರಮದಲ್ಲಿ ಗ್ರಂಥಗಳು ಮುದ್ರಿತವಾಗುವವೆಂಬುದನ್ನು ಈಗ ಹೇಳಲಾಗುವುದಿಲ್ಲ.

———

# ಗ್ರಂಥಕರ್ತರ ಪ್ರಸ್ತಾವನೆ



ಧರ್ಮವೆಂಬದು ಪ್ರಕೃತಿಯಲ್ಲಿಯೇ ಅಂತರ್ಭವವಾಗಿದೆ. ಕಣ್ಣಿಗೆ ದೃಷ್ಟಿ, ಮೈಗೆ ಸ್ಪರ್ಶ, ಜೀವಿಗೆ ಬಾಳು ಸಾವುಗಳು ಅಂತರ್ಭವವಾಗಿರುವಂತೆ ಧರ್ಮವೂ ಸೃಷ್ಟಿಯಲ್ಲಿಯೇ ಅಂತರಸ್ಥವಾಗಿದೆ. ಧರ್ಮದ ಸ್ಥೂಲ ಸೂಕ್ಷ್ಮಗಳೆರಡೂ ಮಾನವನ ಪ್ರಕೃತಿಯಲ್ಲಿಯೇ ಇರುವ ಅಜ್ಞಾನ ಮತ್ತು ಜ್ಞಾನಗಳ ಹೃದಯ-ಗಮ್ಯಗಳೇ. ಸುಖವೇ ಜೀವಿಯ ಗುಣ. ಸುಖವೇ ಜೀವಿಯ ವಿಷಯ. ಈ ಸುಖಕ್ಕಾಗಿ ಅಜ್ಞಾನವು ಒಂದು ಧರ್ಮವನ್ನಿಟ್ಟುಕೊಂಡಿದೆ; ಜ್ಞಾನವು ಬೇರೊಂದು ಧರ್ಮವನ್ನಿಟ್ಟುಕೊಂಡಿದೆ. ಜ್ಞಾನದ ಬೆಳಕೇ ಮೂಡದಿರುವಾಗ ಅಜ್ಞಾನಕ್ಕೂ ಅದರ ರೀತಿನೀತಿಗಳಿಗೂ ದೋಷವು ತಟ್ಟುವದಿಲ್ಲ. ಆದರೆ ಅದು ಹೊಳೆದ ಮೇಲೂ ಅಜ್ಞಾನವು ತನ್ನ ಕಾಗೆಯನ್ನೇ ಕೋಗಿಲೆಯೆಂದಿಟ್ಟುಕೊಂಡು ಆಡಿಸಿ ಹಾಡಿಸಿದರೆ ಅಂಥ ಅಜ್ಞಾನಕ್ಕೆ ನಿರಪರಾಧಿ ಎಂದೆನ್ನಲಿಕ್ಕಾಗದು. ನ್ಯಾಯವು ಅದಕ್ಕೆ ಸಮ್ಮತಿಸುವದಿಲ್ಲ. ವಿಶಿಷ್ಟವು ತೋರಿದ ಮೇಲೂ ಕನಿಷ್ಠವನ್ನೇ ನೋಡಿ ಬದುಕುವದು ನೀತಿಯಲ್ಲ; ವಿಕಸಿತಜೀವಿಯಾದ ಮಾನವನನ್ನು ಮತ್ತೂ ಹಿಂದಕ್ಕೊಯ್ದು ಹಾಳು ಮಾಡುವ ಹಾದಿಯದು.

ಮಾನವನ ಇತಿಹಾಸದಲ್ಲಿ ಮೌಢ್ಯಯುಗವೂ ಇದೆ, ವಿವೇಕಯುಗವೂ ಇದೆ. ಮುಂದಿನದರಲ್ಲಿ ಹಿಂದಿನದರ ಅಯುಕ್ತ ನಂಬಿಕಗಳನ್ನಿಳಿಸುವದು ಸರಿಯಲ್ಲ. ಆಯಾ ಯುಗಕ್ಕೆ ಆಯಾ ನೀತಿರೀತಿಗಳು ಯೋಗ್ಯವಾಗಿರಬಹುದು. ಅವನ್ನು ಅದಲುಬದಲುಗೊಳಿಸುವದು ಮಾತ್ರ ಅವಿವೇಕ, ವಿಪರೀತ ಬುದ್ಧಿ. ವಿನಾಶ ಕಾಲವೂ ಮತ್ತೆ ಅದರ ನೆರಳಿನಲ್ಲಿಯೇ ಇದೆ. ಧರ್ಮವು ಪ್ರಕೃತಿಗೇ ದೂರವಾಗಿದೆ, ಅಪರಿಚ್ಛೇದ್ಯವಾಗಿದೆ, ನಿಗಮಾಗಮಗೋಚರವಾಗಿದೆ, ಪರ್ಯಾಪ್ತವಾಗಿದೆ ಎಂಬ ಕಲ್ಪನೆಗೆ ಆಧಾರವಿಲ್ಲ. ಅಷ್ಟೇ ಅಲ್ಲ- ಅಂಥ ನಂಬಿಕೆಯಿಂದ ಭೇದಖೇದಗಳೇ ಬೆಳೆಯುತ್ತ ಬಂದಿವೆ ಎಂಬದಕ್ಕೆ ಜಗತ್ತಿನ ಇತಿಹಾಸವೇ ಸಾಕ್ಷಿ. ಅಂಥ ಮನಸ್ಸು ಅಂಧಶ್ರದ್ಧೆಗೆ

ಫಲವತ್ತಾದ ಭೂಮಿ. ಅಂಧಶ್ರದ್ಧೆಯು ಶೋಧ ಪರೀಕ್ಷಣ ಘನ ಸಾಹಸಗಳ ವೈರಿ; ಕ್ಲೈಬ್ಯ, ಕಶ್ಮಲ ಹೃದಯದೌರ್ಬಲ್ಯಗಳ ನೀಚ ಗರ್ಭ. ಹಾಗೆಯೇ ಮಾನವನ ಪ್ರಗತಿಗೊಂದು ಬಹು ದೊಡ್ಡ ಅಭ್ಯಂತರ. ಇದು ಹೇಗೆಂಬುದನ್ನು ಸಜ್ಞಾನವಾಗಿ ವಿವರವಾಗಿ ತೋರಿಸುವದೇ ಈ ಪುಸ್ತಕದ ಪ್ರಯತ್ನ.

ವ್ಯಕ್ತಿಗಳ ವಿಷಯವಲ್ಲವಿದು. ಇದು ವೃತ್ತಿಗಳ ವಿಷಯ. ಅಂದ ಮೇಲೆ, ಯಾರು ನಿಂದ್ಯರು ಯಾರು ವಂದ್ಯರು ಎಂಬ ಚರ್ಚೆಗೆಡೆಯೇ ಇಲ್ಲ. ಪ್ರಸಂಗ ಬಂದಂತೆ ಪ್ರಸಿದ್ಧ ಮತವ್ಯಕ್ತಿಗಳ ಉಪದೇಶ ಗಳು ವಿಮರ್ಶೆಗೇನೊ ಬಂದಿವೆ. ಆದರೆ ಧ್ಯೇಯವು ಮಾತ್ರ ವಿಷ ಯವನ್ನು ಚರ್ಚಿಸುವದೇ ಹೊರತು ವ್ಯಕ್ತಿಗಳನ್ನು ತೆಕ್ಕಡಿಗೇರಿಸು ವದಲ್ಲ. ಆಧಾರಗಳು ಮಾದರಿಗಾಗಿ ಮಾತ್ರ ಕೊಡಲ್ಪಟ್ಟವೆ, ಅಲ್ಲದೆ ಬೇರೆಯಾಗಿ ಅವುಗಳನ್ನೇ ಎತ್ತಿಡಲಿಕ್ಕಲ್ಲ. ಅವಕ್ಕೆ ಸರಿಯಾದವಗ ಳನ್ನು ಹೆಚ್ಚು ಕಡಿಮೆ ಎಲ್ಲ ಮತಗ್ರಂಥಗಳಿಂದಲೂ ತೆಗೆಯಬ ಹುದು. ವ್ಯಕ್ತಿಗಳು ವೃತ್ತಿಗಳ ಹಿಡಿತದಲ್ಲಿದ್ದುಕೊಂಡು, ಹಾಗೆಯೇ ಚಿತ್ತವೃತ್ತಿಗಳು ಪರಿಸ್ಥಿತಿಯ ಹಿಡಿತದಲ್ಲಿದ್ದುಕೊಂಡು, ಹೇಗೆ ನಡೆ ಯುತ್ತವೆ; ಮತ್ತು ಇವುಗಳ ಹಾದಿಯಲ್ಲಿ ದೇವಧರ್ಮನಾಗರಿಕತೆಗಳು ಒಂದೊಂದಾಗಿ ಹೇಗೆ ಹುಟ್ಟಿದವು, ಹೇಗೆ ಮಾರ್ಪಡುತ್ತ ಹೋದವು, ಎಂಬದನ್ನು ವಿವರಿಸುವದೇ ಮುಂದೆ ಬರುವ ಪುಟಗಳ ಕೆಲಸ.

ಕೊನೆಗೆ ಮಾನವನ ಬುದ್ಧಿಭಾವಕೃತಕ ಶಕ್ತಿಗಳಿಂದ ಹೊಸ ಪರಿಸ್ಥಿತಿಯನ್ನುಂಟುಮಾಡುವ ರೀತಿ ಮತ್ತು ಅವಶ್ಯಕತೆಗಳನ್ನೂ ತೋರಿಸಲಾಗಿದೆ. ಪೂರ್ವ ಪಶ್ಚಿಮಗಳ ಹಿಂದಿನಿಂದಿನ ಜ್ಞಾನವಾದಿ ಗಳ ರೀತಿಗತಿ ಗಮ್ಯಗಳನ್ನೂ ಸ್ವಲ್ಪ ವಿವರಿಸಲಾಗಿದೆ. ಇಷ್ಟಾಗಿಯೂ **ಪುಸ್ತಕದ ಉದ್ದೇಶವು ಪ್ರಬೋಧಕವಲ್ಲ, ಪ್ರಚೋದಕ ಮಾತ್ರವೇ**. 'ಧಿಯೋ ಯೋನಃ ಪ್ರಚೋದಯಾತ್' ಭಾರತೀ ಯರಿಗೆ ಗೊತ್ತೇ ಇದೆ. ಇದು ಇತರರ ಹಿರೆತನಕ್ಕೆ ಹೊರಡೆನ್ನು ವದಿಲ್ಲ. ಇದು, ನಾವು ಮೊದಲು ನಮ್ಮ ಮತಚಿತ್ತಜೀವನಗಳ ಶುದ್ಧಿಯನ್ನು ಮಾಡುವದೇ ಉತ್ತಮ ಎಂದು ಸೂಚಿಸುತ್ತದೆ. ವಿಷ

ಯವನ್ನು ಮೊದಲು ಬಿಡಿಯಾಗಿ ಬಿಚ್ಚಿಡಲಾಗಿದೆ, ಕೊನೆಗೆ ಇಡಿಯಾಗಿ ಹಚ್ಚಿಬಿಡಲಾಗಿದೆ. ಈ ಎರಡು ಭಾಗಗಳನ್ನೂ ಓದುವದಕ್ಕೆ ಮುಂಚಿತವಾಗಿಯೇ ಶೀಘ್ರ ನಿಷ್ಕರ್ಷೆಗಿಳಿಯಬಾರದು ಎಂಬುದೇ ವಾಚಕರಲ್ಲಿ ನಮ್ರ ವಿನಂತಿ.

ಈ ಪುಸ್ತಕವನ್ನು ತಮ್ಮ ಪ್ರೀತಿಬಲದಿಂದ ಬರೆಯಿಸಿದ ಶ್ರೀ. ಆಲೂರ ವೆಂಕಟರಾಯರಿಗೆ ನಾನು ಬಹು ಕೃತಜ್ಞನಾಗಿದ್ದೇನೆ.

ಪ್ರೇಮಾಯತನ, ತುಂಗಭದ್ರಾ
೨೮ ಎಪ್ರಿಲ್ ೧೯೩೧.

**ತಾರಾನಾಥ.**

# ಅನುಕ್ರಮಣಿಕೆ

# ಧರ್ಮಸಂಭವ.

## ಧರ್ಮದ ಮೂಲ ತತ್ತ್ವಗಳು.

ಲೋಕಯಾತ್ರಾರ್ಥಮೇವೇಹ ಧರ್ಮಸ್ಯ ನಿಯಮಃಕೃತಃ।
ಲೋಕಸಂಗ್ರಹಸಂಯುಕ್ತಂ ವಿಧಾತ್ರಾ ವಿಹಿತಂ ಪುರಾ ॥ [ಮಹಾಭಾರತ]

ಕೇನೈವಾನ್ಯಃ ಪ್ರಭವತಿ ಸೋಽಪರಂ ಬಾಧತೇಽಪುನಃ।
ಯಸ್ತರ್ಕೇಣಾನುಸಂಧತ್ತೆ ಸಧರ್ಮಂ ವೇದನೇತರಃ॥ [ಮನು]

### ವಿಚಾರ ವಿಪ್ಲವ.

ಧರ್ಮದ ಮೂಲತತ್ತ್ವಗಳನ್ನು ಹುಡುಕಿ ತೆಗೆಯುವದೆಂದರೆ ಒಂದು ಅನವಶ್ಯಕವಾದ ಕೆಲಸವೆಂದು ಅನೇಕರು ಭಾವಿಸಬಹುದು. ಧರ್ಮವೇ ಒಂದು ಅನಾದಿ ತತ್ತ್ವ, ಎಲ್ಲಕ್ಕೂ ಮೂಲ- ಎಂದು ಅವರ ತಿಳುವಳಿಕೆಯಾಗಿರಬಹುದು. ತತ್ತ್ವಕ್ಕೆ ಕಾರಣ ಎಂಬರ್ಥವನ್ನು ಮಾಡಿದರೆ ಅವರ ಆ ತಿಳುವಳಿಕೆಯು ತಪ್ಪೆಂದು ಹೇಳಲಿಕ್ಕಾಗುವದಿಲ್ಲ; ಹಾಗೆಯೇ ನಿಜವೆಂದು ಒಪ್ಪಲಿಕ್ಕೂ ಆಗುವದಿಲ್ಲ.

**ಸಚೇತನ ಧರ್ಮದ ಲಕ್ಷಣ.**

ಯಾಕೆಂದರೆ ಕಾರಣವಿಲ್ಲದೆ ಧರ್ಮವು ಹುಟ್ಟಿರುವದು ಅಸಂಭವವೆಂಬದು ನಿಜ. ಹೇಗೆ ಬೀಜವಿಲ್ಲದೆ ಗಿಡವು ಹುಟ್ಟಲಾರದೋ ಹಾಗೆಯೇ ಯಾವುದಾದರೊಂದು ತತ್ತ್ವವಿಲ್ಲದೆ ಧರ್ಮವು ಹುಟ್ಟಿರಲಾರದು. ಆದರೆ ಗಿಡವು ತೋರಿಬರುವಂತೆ ಬೀಜವು ತೋರಿಬರುತ್ತದೋ? ಅದು ಮೊದಲು ತಾನಿದ್ದಂತೆಯೇ ಇರುತ್ತದೋ? ಇಲ್ಲ. ಗಿಡವು ಹುಟ್ಟಬೇಕಾದರೆ ತಾನು ನಶಿಸಿಹೋಗಿ ಮಣ್ಣಿಗೆ ಪಾಲಾದಂತೆ ತೋರುತ್ತದೆ. ಆದರೆ ಈ ಸ್ಥಿತಿಯು ಬೀಜವು ನಾಶವಾದುದರ ಲಕ್ಷಣವಲ್ಲ. ತನ್ನಲ್ಲಿ ಅಡಕವಾಗಿರುವ ಒಂದು ಪ್ರಾಣಬಿಂದುವನ್ನು ಹೊರಪಡಿಸಿ ಬೆಳೆಸುವದಕ್ಕಾಗಿ ತಾನು ಹೊಂದಿದ ಮಾರ್ಪಾಡು.

ಮತ್ತು ತನ್ನ ಪ್ರಕಟರೂಪವಾದ ಗಿಡವು ಹೇಗೆ ಬೆಳೆಯುತ್ತ ಹೋಗುತ್ತದೋ ಹಾಗೆಯೇ ತಾನೂ ಇಳಿಯುತ್ತ ವಿಸ್ತರಿಸುತ್ತ ಹೋಗುತ್ತದೆ. ಬೀಜವು ಈಗಿಲ್ಲ, ಆದರೆ ನಾಶವಾಗಿಯೂ ಇಲ್ಲ; ಮಾರ್ಪಟ್ಟಿದೆ ಅಷ್ಟೇ. ಮರವಾಗಿ ಏರಿದೆ. ಬೇರಾಗಿ ಇಳಿದಿದೆ. ಎರಡೂ ಕಡೆಯೂ ವಿಸ್ತರಿಸಿಕೊಂಡಿದೆ. ಹಾಗೆಯೇ ಧರ್ಮಕ್ಕೂ ಬೀಜವಿದೆ, ತತ್ತ್ವವಿದೆ ಎಂಬದು ನಿಜ. ಧರ್ಮವು ಅದರ ರೂಪ; ಆಚರಣದಿಂದ ತೋರಿಬರುವಂಥಾದ್ದು; ತತ್ತ್ವವು ಆ ರೂಪದ ಉಸಿರು- ಎಂಬದು ತತ್ತ್ವತಃ ನಿಜವೇ. ಆದರೆ ವಸ್ತುತಃ ಜನರು ಧರ್ಮವೆಂದು ಇಟ್ಟುಕೊಂಡು ಆಚರಿಸುವ **ರೀತಿಯು ಸರಿಯೇ ಆಗಿದ್ದ ಪಕ್ಷಕ್ಕೆ ಅದು ನಿಜವಾಡ ಗಿಡದಂತೆ ಮೇಲೂ ಕೆಳಗೂ ಬಲಿತು ಬೆಳೆದು ಹಬ್ಬಬೇಕಷ್ಟೇ?** ಅದು ಹಾಗೆ ವಿಸ್ತರಿಸುವದಿಲ್ಲವಾದರೆ ಅಂಥ ಆಚರಣಕ್ಕೆ ಧರ್ಮವೆನ್ನಬಹುದೋ? ಅದಕ್ಕೆ ನಿಜವಾದ ತತ್ತ್ವವಿದೆ ಎನ್ನಬಹುದೋ? ಅದು ನಿಜವಾಗ ಬೀಜದಿಂದ ಹುಟ್ಟಿದ ವೃಕ್ಷವೆನ್ನಬಹುದೋ? ಅಥವಾ ಅದು ದೊಂಬರವನ ಇಂದ್ರಜಾಲವೋ? ಅವನು ಮುಸುಕಿನೊಳಗೆ ಬೆಳೆಸಿದ ಮಾವಿನ ಗಿಡವೋ? ದೊಂಬರವನ ಮಾವಿನ ಗಿಡವೂ ಕಣ್ಣಿಗೇನೋ ತೋರುತ್ತದೆ. ಅಷ್ಟೇ ಏಕೆ, ಬೆಳೆಯುತ್ತದೆ, ಒಂದೆರಡು ಹಣ್ಣುಗಳನ್ನು ನೋಡುವವರ ಕಣ್ಣಿಗೆ ಹಾಕುತ್ತದೆ. ನೋಡುವವರೂ ಅದನ್ನು ನೋಡಿ ಸಂತೋಷಪಡುತ್ತಾರೆ. ತಮ್ಮ ಜೇಬುಗಳನ್ನು ದೊಂಬರವನಿಗಾಗಿ ಬರಿದು ಮಾಡುತ್ತಾರೆ. ಅವನ ಕೌತುಕಗಳಿಗೆ ಸಾಕಷ್ಟು ಆದರವನ್ನು ತೋರಿಸಿ 'ಭಳಿರೇ ಭಾಪು' ಎಂದವನನ್ನು ಹೊಗಳುತ್ತಾರೆ.

ಅವರಿಗೆ ತಾವು ನೋಡಿದ್ದೆಲ್ಲವೂ ನಿಜವೇ; ಅಲ್ಲವೆ ಮತ್ತೆ? ತಾವು ಕಣ್ಣಾರೆ ಕಂಡದ್ದು! ತನ್ನೊಡನೆ ಅನೇಕರು ಕಣ್ಣು ಬಿಟ್ಟು ನೋಡಿದ್ದು! ಅವರಿಗೆ ಕಂಡ ಮಾವಿನ ಗಿಡವು ಸುಳ್ಳೆಂದು ಹೇಳುವದು ನ್ಯಾಯವೋ?

**ಕಟ್ಟೋ ಕಣ್ಣ ಕಟ್ಟೋ?**

ಹಾಗೆ ಹೇಳಿದರೆ ಅವರಿಗೆ ಸಿಟ್ಟು ಬರಲಿಕ್ಕಿಲ್ಲವೇ? ಅವರು ಗಿಡವನ್ನು ನೋಡಲಿಲ್ಲವೋ, ಕಾಣಲಿಲ್ಲವೋ? ಅಷ್ಟಿದ್ದರೂ ಅವರ ಮಾತು ನಿಜವಲ್ಲ, ಅವರ ಅನುಭವವು

ನಿಜವಲ್ಲ ಎಂದು ಹೇಳಬಹುದೋ? ಆದರೆ ಈ ಅನುಭವಶಾಲಿಗಳು ಕಣ್ಣಾರೆ ಕಂಡರೂ ಪರಾಮರಿಸಿ ನೋಡಬೇಕು-ಎಂಬದನ್ನು ಬಲ್ಲರೋ? ಬಲ್ಲರಾದರೆ ಅದನ್ನು ಆಚರಣದಲ್ಲಿಟ್ಟುಕೊಂಡಿದ್ದಾರೋ ? 'ಯಾಕೆ? ನಮಗೆ ಕಣ್ಣಿಲ್ಲವೋ? ನಾವೇನು ಸ್ವಪ್ನವನ್ನು ಕಾಣುತ್ತಿದ್ದೇವೋ? ನೋಡುತ್ತಿದ್ದ ನೂರಾರು ಮಂದಿಗೂ ಕನಸು ಒಂದೇ ಆದೀತೋ? ನಾವು ಕಣ್ಣಾರೆ ನೋಡಿದುದರಲ್ಲಿ ಸಂದೇಹಕ್ಕೆ ಅವಕಾಶವೇನು?' —ಎಂದವರು ಕೇಳುವದು ಸಹಜವೇ. ಆದರೆ ಪರಾಮರಿಕೆಗೆ ಕಣ್ಣೊಂದೇ ಸಾಲದು. ಈ ಅನುಭವಿಕರಲ್ಲಿ ಯಾರಾದರೂ ತಾವು ನೋಡಿದ ಗಿಡದ ಬುಡವನ್ನು ಕೆರೆದು ನೋಡಿದ್ದಾರೋ? ಅಲ್ಲಿ ಬೇರಾದರೂ ಇತ್ತೋ? ದೊಂಬರವನು ಆ ಗಿಡವನ್ನು ಹುಟ್ಟಿಸಿದ ಜಾಗೆಯಲ್ಲಿ ಅದನ್ನು ಬಿಟ್ಟುಹೋಗಬಲ್ಲನೋ? ಹಾಗೆ ಬಿಟ್ಟಲ್ಲಿ ಅದು ಬೆಳೆದೀತೋ? ಹಾಗಿದ್ದರಲ್ಲವೆ ಅದಕ್ಕೆ ನಿಜವಾದ ಗಿಡವೆನ್ನುವದು ಯೋಗ್ಯ? **ಬಿಟ್ಟಲ್ಲಿ ನಿಂತು ಬೆಳೆಯುವ ತ್ರಾಣವಿಲ್ಲದುದಕ್ಕೆ ಪ್ರಾಣವಿದೆಯೆಂದು ನಂಬಲಿಕ್ಕಾದೀತೋ?** ತೋರಿಬರುವ ಧರ್ಮಕ್ಕೂ ಈ ಪ್ರಶ್ನೆಗಳನ್ನೇ ಹಾಕಿದರೆ ತಕ್ಕ ಸಮಾಧಾನವು ದೊರೆಯಬೇಕು. ಇಲ್ಲವಾದರೆ ಅದು ಧರ್ಮವೋ ಕಣ್ಣುಕಟ್ಟೋ– ಎಂಬ ಸಂದೇಹವು ಹುಟ್ಟುವದು ಸಹಜವೇ, ಬುದ್ಧಿ ಇನ್ನೂ ಸಾಯದೆ ಇರುವಲ್ಲಿ ಅನಿವಾರ್ಯವೇ. ಸಾರಾಂಶ– ಧರ್ಮಕ್ಕೆ ತತ್ತ್ವದ ಬೀಜವೇ ಮೂಲವಾಗಿದ್ದಲ್ಲಿ ಅದು ತಾನಾಗಿ ನಿಲ್ಲಲು ಅರ್ಹವಾಗಿರಬೇಕು, ಬೆಳೆಯಬೇಕು. ಗಿಡವು ಬೆಳೆಯುವದೆಂದರೆ ಬುಡವು ಹಬ್ಬುವದು; ಬುಡವು ಹಬ್ಬಿದಂತೆ ಗಿಡವೂ ಬೆಳೆಯುವದು. ಇವನ್ನು ವಿಂಗಡಿಸಲಾಗುವದಿಲ್ಲ. ಧರ್ಮವೂ ನಿಜವೇಯಾಗಿರುವಲ್ಲಿ ತತ್ತ್ವವೂ ಅದರಲ್ಲಿಯೇ ಇರಬೇಕು. ತತ್ತ್ವವು ಬೇರೂರಿದಂತೆ ಧರ್ಮಾಚರಣವೂ ಬೆಳೆದು ಹಬ್ಬುವದು. ಅದು ಹಬ್ಬಿದಂತೆ ತತ್ತ್ವವೂ ಬಲಗೊಳ್ಳುವದು. ಅಲ್ಲಿ ತತ್ತ್ವಕ್ಕೆ ಆಚರಣವು ಸಾಕ್ಷಿ, ಆಚರಣಕ್ಕೆ ತತ್ತ್ವವೇ ಮೂಲ. ಸ್ವತಃಸಿದ್ಧ ವಿಷಯವಿದು. ಹಾಗಿಲ್ಲದಿರುವಲ್ಲಿ ಮಾತ್ರ ಸಂದೇಹ–ಶೋಧ– ವಿಮರ್ಶೆಗಳಿಗೆ ಜಾಗೆ. ಪ್ರಮೇಯದ ಸಹಜ ಲಕ್ಷಣಗಳ ಅಭಾವವೇ ಸಂದೇಹಕ್ಕೆ ಮೂಲ; ಪರೀಕ್ಷೆಗೆ ಸ್ಫೂರ್ತಿ. ಹೆಸರಿಗೆ

ತಕ್ಕ ಗುಣರೂಪವಿಲ್ಲದೆ ಹೋದಲ್ಲಿ ಸಂಶಯವು ಹುಟ್ಟುವದಾದರೆ ವಿಶೇಷವೇನು ?

**ಉಪಾಯವು ಕುದುರಲಿಲ್ಲ.**

ಪರೀಕ್ಷೆಗೆ ಆಧಾರವಾವುದು ? ಎಂದು ಯಾರಾದರೂ ಕೇಳಬಹುದು. ತಮ್ಮ ಆಚರಣಕ್ಕೆ ಸರಿಯಾದ ಆಧಾರವನ್ನು ಯಾವದಾದರೊಂದು ಪುಸ್ತಕದಲ್ಲಿ ಅವರು ತೋರಿಸಿಕೊಡಬಹುದು. ಆದರೆ ಆ ಪುಸ್ತಕಕ್ಕೆ ವಿರುದ್ಧವಾಗಿ ಇನ್ನೊಂದು ಪುಸ್ತಕ ವಿದ್ದರೆ? 'ಆ ಗ್ರಂಥವು ನಮಗೆ ಆಧಾರವಲ್ಲ; ನಮ್ಮ ಹಿರಿಯರು ಅದನ್ನು ಲೆಕ್ಕಕ್ಕೇ ತಂದುಕೊಂಡಿಲ್ಲ' ಎಂದವರು ಹೇಳಬಹುದು. 'ನಿಮ್ಮ ಹಿರಿಯರು ಅದನ್ನು ಆಧಾರವಾಗಿ ಮನ್ನಿಸಿದ್ದಕ್ಕೆ ಕಾರಣವೇನು' ಎಂದು ಕೇಳಿದರೆ ಆಗೇನೆನ್ನುವರು? 'ಅವರ ಹಿರಿಯರಿಗೆ ಅದು ಪೂಜ್ಯವಾಗಿತ್ತು' ಎಂದು ಹೇಳುವರು. ಹಾಗೆಂದರೆ ಬಿಡಿಸಲಾರದ ಕೆಲವು ಪ್ರಮೇಯಗಳು ಹೊರಡುವವು. ಮತಗಳೆಷ್ಟೋ ಇವೆ. ಒಂದೊಂದು ಮತಕ್ಕೆ ಒಂದೋ ಎರಡೋ ಇನ್ನೂ ಹೆಚ್ಚೋ ಆಧಾರಗ್ರಂಥಗಳಿವೆ. ಎಲ್ಲ ಮತಗಳ ಅನುಯಾಯಿಗಳಿಗೂ ತಮ್ಮ ತಮ್ಮ ಗ್ರಂಥಗಳೇ ಪ್ರಮಾಣ; ಯಾಕೆಂದರೆ ಅವು ಅವರ ಹಿರಿಯರಿಗೆ ಪೂಜ್ಯವಾಗಿದ್ದವು. ಆದರೆ ಈ ಗ್ರಂಥಗಳು ಪರಸ್ಪರ ವಿರುದ್ಧವಾಗಿರುವದನ್ನು ನಾವೆಷ್ಟೋ ಕಡೆ ಕಾಣಬಹುದು. ಕೆಲವು ಕಡೆ ಹೋಲಿಕೆಯಿದ್ದರೆ ಅನೇಕ ಕಡೆ ತಾಳಮೇಳವಿಲ್ಲದಿರಬಹುದು. ಅನೇಕ ಕಡೆ ಹೊಂದಿಕೆ ಇದ್ದರೂ ಹಲಕೆಲವು ಕಡೆ ವಿರೋಧವಿರಬಹುದು. ಹೇಗಿದ್ದರೂ ಒಂದೇ ಅಲ್ಲವೆ? ಯಾಕೆಂದರೆ, ಗ್ರಂಥವು ಹಿರಿಯರಿಗೆ ಪೂಜ್ಯವಾಗಿದ್ದಿರೋಣದರಿಂದ ಅವರ ಸಂತಾನಕ್ಕೂ ಹಾಗೆಯೇ ಇರಬೇಕಾದಲ್ಲಿ, ವಿರೋಧವು ಸಮಾಜಕ್ಕೆ ಹಾನಿಕರವಾಗಿದ್ದರೂ ಅವನ್ನು ಹಾಗೆಯೇ ಇಟ್ಟುಕೊಳ್ಳುವದು ಧರ್ಮವೇ ಆಯಿತಷ್ಟೇ! ದೇಶಕಾಲಪರಿಸ್ಥಿತಿ ಮಾರ್ಪಟ್ಟರೂ ಈ ಗ್ರಂಥಗಳು ಮಾರ್ಪಡಲಾರವು! ಗ್ರಂಥಗಳು ಅಲ್ಲಲ್ಲಿ ವಿರುದ್ಧವಾಗಿದ್ದು-ಕೊಂಡಿರುವವರೆಗೆ ಅವುಗಳ ಉಪದೇಶವನ್ನೇ ನಡತೆಯ ಸೂತ್ರವನ್ನಾಗಿಟ್ಟುಕೊಂಡಿರುವವರಲ್ಲಿಯೂ ವಿರೋಧವು ಇದ್ದೇ ತೀರಬೇಕು.

ಗ್ರಂಥಗಳನ್ನು ಗೂಡಿನಲ್ಲಿಯೇ ಇಟ್ಟುಕೊಂಡು ಅವುಗಳನ್ನು ವ್ಯವಹಾರಕ್ಕಿಳಿಸದೆ ಹೋದಲ್ಲಿ ವಿಷಯವು ಬೇರೆ. ಆದರೆ ಅವನ್ನು ತೆರೆದು ಅವುಗಳ ಹೇಳಿಕೆಯಂತೆ ಹೆಜ್ಜೆಯನ್ನಿಡುವವರೆಗೆ **ಅವುಗಳಲ್ಲಿ ವಿರೋಧವಿದ್ದರೆ ಅನುಯಾಯಿಗಳಲ್ಲಿಯೂ ವಿರೋಧವು ಇದ್ದೇ ತೀರುವದು–** ಎಂಬದನ್ನು ಬೇರೆಯಾಗಿ ಸಾಧುಗೊಳಿಸುವದು ಅನವಶ್ಯಕವೇ. ಈ ವಿರೋಧವನ್ನು ನೋಡಲಿಕ್ಕೆ ನಾವು ದೂರವೆಲ್ಲಿಯಾದರೂ ಹೋಗಬೇಕಾಗಿಲ್ಲ. ನಮ್ಮ ದೇಶದ ಮೊದಲನೆಯ ದುರ್ದೈವ ಅಂಥ ವಿರೋಧದಲ್ಲಿಯೇ ಇದೆ, ಎಂದರೆ ತಪ್ಪಾಗಲಾರದು. ನಮ್ಮ ದಾಸ್ಯಕ್ಕೆ ಅಂಥ ವಿರೋಧವೇ ಕಾರಣ ಎಂದು ನಿಸ್ಸಂದೇಹವಾಗಿ ಹೇಳಬಹುದು. ಹೀಗಿರುವಾಗ ಹಿರಿಯರು ತಮ್ಮ ಗ್ರಂಥಗಳನ್ನು ತಮ್ಮ ಸಂತಾನದ ವಿನಾಶಕ್ಕಾಗಿ ಬರೆದರೋ ವಿಕಾಸಕ್ಕಾಗಿ ಬರೆದಿಟ್ಟರೋ? ವಿನಾಶಕ್ಕಾಗಿ, ಅದರಲ್ಲಿಯೂ ತಮ್ಮದೇಯಾಗಿರುವ ಸಂತಾನದ ವಿನಾಶಕ್ಕಾಗಿ ಅವರು ಹಾಗೆ ಬರೆದರು- ಎಂದು ಊಹಿಸಲಿಕ್ಕೂ ಆಗುವದಿಲ್ಲ! ಹಿರಿಯರು ಕಿರಿಯರಿಗಾಗಿ ಹಾಗೆ ಭಾವಿಸುವದು ಅಸಹಜವೇ. ಅವರ ಉದ್ದಿಶ್ಯವು ಒಳ್ಳೆಯದೇ ಆಗಿದ್ದಿರಬೇಕು. ಹಾಗಾದರೆ ಈಗ ಅವರ ಮೇಲ್ಪಂಕ್ತಿಯಿಂದ ಕೇಡು ಸಂಭವಿಸಲಿಕ್ಕೆ ಕಾರಣವೇನು? ಅವರು ಎಂದೆಂದಿಗೂ ಕೋರಿರಲಾರದ ಹಾನಿಯುಂಟಾಗಲಿಕ್ಕೆ ಕಾರಣವೇನು? 'ನಮ್ಮ ಕಷ್ಟನಷ್ಟಗಳು ಅವರ ತಪ್ಪಲ್ಲ, ನಮ್ಮ ಪ್ರಾರಬ್ಧ' ಎಂದೆನ್ನುವವರು ನಮ್ಮಲ್ಲಿನ್ನೂ ಅನೇಕರಿದ್ದಾರೆ! ಆದರೆ ಪ್ರಾರಬ್ಧ ಎಂಬ ಶಬ್ದವು ರಕ್ಷಾಮಂತ್ರವಲ್ಲ. ಅದಿದ್ದರೂ ಇದ್ದುಕೊಂಡಿರಲಿ. ಅದು ನಮ್ಮ ಕಣ್ಣಿಗೆ ಕಾಣುವದಿಲ್ಲ. ಅದನ್ನು ಸಯುಕ್ತಿಕವಾಗಿ ಚರ್ಚಿಸಲಾಗುವದಿಲ್ಲ. ಆ ಒಂದು ಶಬ್ದವು ಯಾವ ಪ್ರಶ್ನೆಗೂ ಸಂದೇಹಕ್ಕೂ ಸಮಾಧಾನವಾಗಲಾರದು. ಯಾಕೆಂದರೆ ಪ್ರಯತ್ನವೂ ಪ್ರಾರಬ್ಧಕ್ಕೆ ಸೇರಿದ್ದೇ ಎಂದು ಒಂದು ಯುಕ್ತಿಯನ್ನೂ ಹೇಳಬಹುದಲ್ಲವೆ? ಯುಕ್ತಪ್ರಶ್ನೆಗೆ ಯುಕ್ತರೀತಿಯಿಂದಲೇ ಸಮಾಧಾನವನ್ನು ಕೊಡಬೇಕು. ಇಲ್ಲಿ ಪ್ರಶ್ನೆ ಇದು– ನಮಗೆ ಬಂದ ಅಧೋಗತಿಗೆ ಹಿರಿಯರ ಉಪದೇಶಗಳು ಹಲಕೆಲವು ಕಾರಣವಾಗಿರಬಹುದು; ಆದರೆ ಅವರ ಇಚ್ಛೆಯೂ ಹಾಗಿತ್ತೋ? ಅದು ಅಸಂಭವ-- ಎಂದಮೇಲೆ

**ಅವರ ಸದುದ್ದಿಶ್ಯದಂತೆ ಉಪಾಯವು ಮಾತ್ರ ಕುದುರಲಿಲ್ಲ-** ಎಂದು ಧೈರ್ಯವಾಗಿ ಹೇಳಬಹುದಲ್ಲವೆ? ಅವರು ಸರ್ವಜ್ಞರಾಗಿರಲಿಲ್ಲ. ಆದುದರಿಂದ ಉದಾರಚಿತ್ತರಾಗಿದ್ದರೂ ಭವಿಷ್ಯದ ಹಾದಿಯನ್ನು ಹಾಕಲು ಸಾಕಷ್ಟು ಯೋಗ್ಯತೆಯನ್ನುಳ್ಳವರಾಗಿರದೆ ಹೋದರೆಂದು ಹೇಳಬಹುದಲ್ಲವೆ?

'ಅವರ ಬುದ್ಧಿಯು ನಮಗಿದೆಯೋ? ಅವರ ದೂರದೃಷ್ಟಿಯು ನಮಗಿದೆಯೋ? ಅದಲ್ಲದೆ ಅವರ ವಿಚಾರಗಳನ್ನು ಬದಲಾಯಿಸುವ ಅಧಿಕಾರವು ನಮಗಿದೆಯೋ?' ಎಂದು ಅನೇಕರು ಕೇಳುವದುಂಟು.

**ಹಾಗೇಕೆ?** ಅವರಿಗೆ ದೂರದೃಷ್ಟಿಯಿದ್ದಿಲ್ಲವೆಂಬದು ನಮ್ಮ ದುಃಸ್ಥಿತಿಯಿಂದಲೇ ಸಿದ್ಧವಾಗುತ್ತದೆ. ಅವರ ಸದುದ್ದಿಶ್ಯದ ವಿಷಯವಾಗಿ ಪ್ರಶ್ನೆಯೇ ಇಲ್ಲ. ಆದರೆ ಅವರ ದೂರದೃಷ್ಟಿಗೆ ಮಾತ್ರ ಸಾಕ್ಷಿ ಇಲ್ಲ. ಇಂದು ಆಗುವ ಬದಲಾವಣೆಗಳನ್ನು ಅಂದೇ ಅವರು ಊಹಿಸಿ ನೋಡಿ ವಿವರಿಸಿ ಹೊಂದಿಕೆಯ ಉಪದೇಶವನ್ನು ಕೊಟ್ಟಂತೆ ತೋರುವದಿಲ್ಲ. ಇದು ಅವರ ದೃಷ್ಟಿಗೆ ಬಹುದೂರವೇ ಆಗಿತ್ತು. ಇತ್ತೀಚೆಯ ಕಾಲಗತಿಯು ಬಹು ತೀವ್ರಗಾಮಿಯಾಗಿದೆ. ಇಂದಾಗುವದು ನಿನ್ನೆ ಗೊತ್ತಿರಲಿಲ್ಲ. ನಾಳೆಯಾಗುವದನ್ನು ಇಂದು ಹೇಳುವದು ಕಷ್ಟ. ಮಹಾತ್ಮರ ದಂಡಿಯಾತ್ರೆಯ ಪರಿಣಾಮವು ಕೆಲವು ವಾರಗಳೊಳಗಾಗಿ ಮಾತ್ರವೇ ಇಡೀ ಭರತವರ್ಷವನ್ನೇ ಹೊಡೆದೆಬ್ಬಿಸಿ ಸ್ವಾತಂತ್ರ್ಯದ ಕಠಿಣ ಮಾರ್ಗವನ್ನು ಸರಳವಾಗಿ ನಡೆಸುವದು, ಎಂದು ಯಾರ ಊಹೆಯಲ್ಲಿಯಾದರೂ ಇತ್ತೋ? ದೊಡ್ಡ ದೊಡ್ಡ ದೇಶಗಳನ್ನೂ ಕೋಟ್ಯನುಕೋಟಿ ಜನಸಂಖ್ಯೆಯನ್ನೂ ಒಂದು ಹಿಡಿಯಲ್ಲಿಟ್ಟುಕೊಂಡು ನಡೆಸುತ್ತಿರುವ ಬ್ರಿಟಿಶ್ ಬಲವನ್ನು ಭಾರತೀಯ ನಿರಾಯುಧ ಸೈನ್ಯವು ಕುಣಿಸುವದು, ಎಂದು ಯಾರಿಗಾದರೂ ನಿಶ್ಚಯವಿತ್ತೋ? ಸಾಯುಧಸಮರಕ್ಕೆ ಸದಾ ಸಿದ್ಧರೇಯಾಗಿರುವ ಬ್ರಿಟಿಶ್ ಜನಾಂಗವನ್ನು ಅನೇಕ ಶತಮಾನಗಳಿಂದ ದಾಸ್ಯವನ್ನು ಸದ್ದಿಲ್ಲದೆ ಸ್ವೀಕರಿಸಿದ ನಮ್ಮ ಜನಾಂಗವು ನಿರಾಯುಧಸಮರದಿಂದ ಹಾದಿಗೆ ತರುವದೆಂದು ಯಾರಾದರೂ ನಂಬಿದ್ದರೋ? ಆದರೂ ಒಂದೇ

ವರ್ಷದೊಳಗೆ ತಾವು ಗುಲಾಮರನ್ನಾಗಿಟ್ಟುಕೊಂಡ ಜನರ ಗುಲಾಮು ಪ್ರತಿನಿಧಿಯೊಡನೆ ಅವರ ಪ್ರತಿನಿಧಿಯು ಸಮಾನಸ್ಕಂದನಾಗಿ ನ್ಯಾಯದ ಮಾತಿಗೆ ಬಂದನೋ ಇಲ್ಲವೋ? ಒಂದು ವರ್ಷದ ಚಿಕ್ಕ ಕಾಲದೊಳಗೆ ಅದೆಂತಹ ಅಲ್ಲೋಲ ಕಲ್ಲೋಲ! ಜಗತ್ತಿನಲ್ಲೆಲ್ಲ ಎಂದೂ ಊಹೆಗೆ ಬಾರದ ಉತ್ಕ್ರಾಂತಿ ಪರಿವೃತ್ತಿಗಳು ನಡೆಯುತ್ತಲಿವೆ. ಹೀಗಿರುವಾಗ ಹಿಂದಿನವರ ದೂರದೃಷ್ಟಿಗೆ ಎಲ್ಲೆಲ್ಲಿಯೂ ಸಾಕ್ಷಿಯು ದೊರೆಯುವದಿಲ್ಲ. ಇಂದಿನ ಕಾಲಮಹಿಮೆಯು ಬಹು ವಿಚಿತ್ರವಾಗಿದೆ. ಅದಕ್ಕೆ ಮಿಂಚಿನ ವೇಗವು ಬಂದಿದೆ. ಅದನ್ನು ತಿಳಕೊಂಡು ಅದರೊಡನೆ ಹೊಂದಿ ಹೊಂದಿಕೊಂಡು ನಡೆಯುವ ಭಾರವು ಇಂದಿನವರದು. ಕಾಲವು ಈಗಿನದು, ಹಾದಿಯು ಈಗಿನದು; ಅದಕ್ಕೆ ಹೆಜ್ಜೆಯೂ ಇಂದಿನದೇಯಾಗಿರಬೇಕು, ಬೆಳಕೂ ಇಂದಿನದೇಯಾಗಿರಬೇಕು; ಅಲ್ಲದೆ ಮುಂದಿನ ಹಾದಿಗೆ ಹಿಂದಿನ ಬೆಳಕನ್ನು ನಂಬಿ ಉಪಯೋಗವಿಲ್ಲ. ಅದರಿಂದ ಮುಂದೆ ಹಾದಿಯಲ್ಲಿ ಬೀಳುವದು ನೆರಳು, ಕತ್ತಲೆ; ಹೊರತು ಬೆಳಕಲ್ಲ.

ಹಾದಿಗೆ ತಕ್ಕ ಹೆಜ್ಜೆ.

'ಹಳೆಯ ಗ್ರಂಥಗಳನ್ನು ದೇವರು ಹೇಳಿದ್ದಾನೆ, ಅಪೌರುಷೇಯವಾಣಿಯದು. ಅದರಲ್ಲಿ ಕೊರತೆಗಳಿರುವದು ಹೇಗೆ?' ಎಂದು ಅನೇಕರು ಕೇಳುವದೂ ಉಂಟು. ಹಾಗಿದ್ದ ಪಕ್ಷದಲ್ಲಿ ಒಂದೊಂದು ಮತಕ್ಕೆ ಒಂದೊಂದು ರೀತಿಯಾಗಿ ಹೇಳಿಕೊಟ್ಟ ದೇವನು ಒಬ್ಬನೆಯೋ ಅಲ್ಲವೋ? ಒಬ್ಬನೇ ಆಗಿದ್ದರೆ ಆತನಿತ್ತ ಸ್ಫೂರ್ತಿಯಲ್ಲಿ ವ್ಯತ್ಯಾಸವಿರಲಿಕ್ಕೇನು ಕಾರಣ? ಆತನಿಗೇ ಸ್ಥಿರಬುದ್ಧಿಯಿಲ್ಲವಾದರೆ ಆತನು ಹುರಿಗೊಳಿಸಿದ ಋಷಿಮುನಿಪ್ರವಾದಿಗಳ ಬುದ್ಧಿಯಲ್ಲಿ ಶ್ರದ್ಧೆಯನ್ನಿಡುವದು ಹೇಗೆ? ಆತನ ಸ್ಮರಣಶಕ್ತಿಯಲ್ಲಿ ಕೊರತೆಯುಂಟೆಂದೆನ್ನಬಹುದೋ? ಹಾಗಾದರೆ ಹಿಂದಿನದೇ ಆತನಿಗೇ ಸ್ಮೃತಿಯಲ್ಲಿರುವದಿಲ್ಲವಾದರೆ ಮುಂದಿನದನ್ನು ತಿಳಿಯುವ ಶಕ್ತಿಯು ಆತನಿಗೆ ಇದೆ ಎಂಬು ಹೇಗೆ ಒಪ್ಪಿಕೊಳ್ಳಲಿಕ್ಕಾದೀತು? ಆತನ ಸ್ಮೃತಿಯೇ ಹಾಗಿರುವಾಗ ಆತನ ಸ್ಫೂರ್ತಿಯನ್ನು ಪ್ರಕಟಿಸಿದವರನ್ನು ನಂಬುವದು ಹೇಗೆ ಸಾಧ್ಯ? ಸರ್ವಜ್ಞನಾಗಿರುವವನು ಸ್ಮೃತಿರಹಿತನಾಗಿರಲಾರನು. ದೇವರು ಸರ್ವಜ್ಞನು, ಎಂಬ ನಂಬಿ

ತಪ್ಪೆಲ್ಲಿದೆ?

ಕೆಯಿರುವಲ್ಲಿ ಮತಮತಾಂತರಗಳ ವ್ಯತ್ಯಾಸವನ್ನು ಆತನ ತಲೆಯ ಮೇಲೆ ಹೊರಿಸಲಿಕ್ಕಾಗದು. ಅದರ ಕಾರಣವು ಬೇರೆ ಇನ್ನೆಲ್ಲಿಯೋ ಇರಬೇಕು. **ಅನುಯಾಯಿಗಳಲ್ಲಿರಬೇಕು, ಗ್ರಂಥವಾಕ್ಯಗಳಲ್ಲಿರಬೇಕು,** ಅವನು ಸರ್ವಜ್ಞನೇಯೆಂದಿಟ್ಟುಕೊಂಡ ಪಕ್ಷಕ್ಕೆ.

**ವ್ಯತ್ಯಾಸವೋ ವೈವಿಧ್ಯವೋ?**

'ಮತಮತಾಂತರಗಳ ವ್ಯತ್ಯಾಸವು ನಿಜವಾಗಿಯೂ ವ್ಯತ್ಯಾಸವಲ್ಲ, ಅದೊಂದು ವೈವಿಧ್ಯ' ಎಂದು ಹಲಕೆಲವರು ಹೇಳುತ್ತಾರೆ. ಅದು ಹೇಗಾದೀತು? ವ್ಯತ್ಯಾಸಗಳಿಂದಲೇ ಒಡಕುತೊಡಕುಗಳು ಬಂದಿವೆಯೆಂಬದು ಹಾಗೆನ್ನುವವರಿಗೇನೋ ಚನ್ನಾಗಿ ಗೊತ್ತು. ಆದರೆ ಅವಕ್ಕೆ ಧರ್ಮಗ್ರಂಥಗಳು ಮೂಲ ಎಂದೆನ್ನುವದಕ್ಕೆ ಅವರಿಗೆ ಧೈರ್ಯವು ಸಾಲದು. ಅದಕ್ಕೆ ವೈವಿಧ್ಯವೆಂಬ ಢಾಲನ್ನು ಇಟ್ಟುಕೊಂಡು ಡೌಲಾಗಿ ಮಾತನಾಡಿದರೆ ಸಮಾಜಕ್ಕೆ ಸುಖವಾದೀತೋ ? ಸಮಾಜವೆಲ್ಲವೂ ಅಂಥ ಅರ್ಥವನ್ನು ಸ್ವೀಕರಿಸೀತೋ ? ವ್ಯತ್ಯಾಸವು ಬರೇ ತೋರಿಕೆಯದಾಗಿದ್ದು ಅದರ ನೈಜವು ವೈವಿಧ್ಯತೆಯೆಂದು ಹೇಳುವದು ಸರಿಯೋ ? ಪರೀಕ್ಷಿಸಿ ನೋಡೋಣ. ಗೋಹತ್ಯೆಯು ಹಿಂದೂ ಜನರಿಗೆ ಘೋರ ಪಾಪವು. ಮುಸಲ್ಮಾನರಿಗೆ ಬಕರೀದ್ ಹಬ್ಬಕ್ಕೆ ಸೇರಿರುವ ಒಂದು ಧರ್ಮವೇ ಅದು. ಕ್ರೈಸ್ತರಿಗದು ತ್ಯಾಜ್ಯವಲ್ಲ. ಸಾರಾಯಿಯು (ದ್ರಾಕ್ಷೆಯದು) ಕ್ರೈಸ್ತರಿಗೆ ಒಂದು ಸಾಮುಗ್ರಿ. ಯೇಸುವು ಜನರಾಶಿಗಾಗಿ ತಾನು ಸುರಿಸಿದ ರಕ್ತದ ಸಂಕೇತ. ಆದರೆ ಮುಸಲ್ಮಾನರಿಗೆ ಅದು ಕೆಟ್ಟ ವಿಷ. ಅದರ ಸ್ಮರಣೆಯು ಸಹ ಅವರಿಗೊಂದು ದೊಡ್ಡ ಪಾಪವೇ. ಹಿಂದುಗಳಿಗದು ಹೆಚ್ಚಾಗಿ ತ್ಯಾಜ್ಯವೇ. ವಾದ್ಯವಾಲಗಗಳು ಹಿಂದುಗಳಿಗೆ ದೇವಾಲಯಗಳಲ್ಲಿ ಪೂಜೆ ಮತ್ತು ಹಬ್ಬಗಳಲ್ಲಿ ಬೇಕಾದ ಸಂಗತಿ. ಮುಸಲ್ಮಾನರಿಗದು ಹರಾಮ್. ಅವುಗಳ ಗಾಳಿಯನ್ನು ಸಹ ಅವರು ತಮ್ಮ ಮಜೀದಿಗಳ ಮುಂದೆ ಸಹಿಸಲಿಕ್ಕಿಲ್ಲ. ಅಷ್ಟಕ್ಕಾಗಿ ಪ್ರತಿವರ್ಷವೂ ನಮ್ಮಲ್ಲಿ ಎಷ್ಟೋ ಖೂನಿಕೊಲೆಗಳೇ ನಡೆಯುತ್ತವೆ! ಕ್ರೈಸ್ತರಿಗೋ ಅವು ಹಿಂದುಗಳಿಗಿರುವಂತೆ ಪ್ರಿಯವೇ. ವಿಗ್ರಹಾರಾಧನೆಯು ಸನಾತನ ಸಾಂಪ್ರದಾಯ

ಮಾತ್ರದ ಹಿಂದುಗಳಿಗೆ ಬಿಡಲಾರದ ಧರ್ಮ. ಕ್ರೈಸ್ತರಲ್ಲಿಯೂ ಒಂದು ಭಾಗಕ್ಕೆ (ರೋಮನ್ ಕೆಥೊಲಿಕ್) ಹಾಗೇ. ಅದೇ ಇನ್ನೊಂದು (ಪ್ರೊಟೆಸ್ಟಂಟ್) ಭಾಗಕ್ಕೆ ಅದರ ಸಹನವು ಸಹ ಇಲ್ಲ. ಮುಸಲ್ಮಾನರಿಗದು ಹರಾಮ್, ದೇವದ್ರೋಹ, ಬಹು ಕೆಟ್ಟ ಪಾಪ. ಇವು ಮತಮತಾಂತರಗಳಲ್ಲಿರುವ ವ್ಯತ್ಯಾಸಗಳು. ದೃಷ್ಟಾಂತಕ್ಕೆ ಕೆಲವನ್ನು ಮಾತ್ರ ಕೊಡಲಾಗಿದೆ. ಆಹಾರ, ವ್ಯವಹಾರ, ವಿವಾಹ, ದಾಂಪತ್ಯ ಮುಂತಾದವುಗಳ ನೀತಿಗಳಲ್ಲೆಲ್ಲ ಎಷ್ಟೋ ವ್ಯತ್ಯಾಸಗಳಿವೆ! ಈ ವ್ಯತ್ಯಾಸಗಳಿಗೆ ವೈವಿಧ್ಯವೆಂದು ಹೇಳುವದು ಸರಿಯೋ? ಇದನ್ನೆಲ್ಲ ಒಬ್ಬ ದೇವನೇ ಹೇಳಿಕೊಟ್ಟನೋ? **ವೈವಿಧ್ಯವು ವಿರೋಧವಾಗಲಾರದು.** ಒಂದೇ ವಸ್ತುವಿನ ವಿವಿಧರೂಪಗುಣಗಳಲ್ಲಿ ಉಚ್ಚನೀಚಭೇದಭಾವಗಳ ಖೇದಯುದ್ಧಗಳ ಉತ್ತೇಜನವು ಎಂದಿಗೂ ಇರಬಾರದು; ವಿರೋಧದ ಬೀಜವು ಎಂದಿಗೂ ಇರಬಾರದು. ಹಿಂದಿನವರ ಜ್ಞಾನಸಂಚಯಕ್ಕೆ ಅಪಾಯವು ಬರಕೂಡದು. ವೈವಿಧ್ಯವು ಒಂದೇ ಹಾರದಲ್ಲಿಯ ಮಣಿಗಳಿದ್ದಂತೆ. ವಿರೋಧವು ಮೂಳೆಗೆ ಬಿದ್ದ ನಾಯಿಗಳಂತೆ. ಧರ್ಮವೆಂಬದರಲ್ಲಿ ಇಂಥ ಮೂಳೆಯು ಕಂಡು ಬಂದರೆ ಅದರಿಂದ ಅನುಯಾಯಿಗಳ ಉದ್ಧಾರವಾಗುವದೋ? ಅಥವಾ ಜಗಳವೇ ಹೆಚ್ಚುವದೋ? ವೈಷಮ್ಯವು ಬೆಳೆಯದಿರುವದೋ? ದೇವರನ್ನು ಸರ್ವಜ್ಞನೇ ಅಲ್ಲದೆ ದಯಾಸಿಂಧು ಎಂದು ಸಹ ಇಟ್ಟುಕೊಂಡಲ್ಲಿ ಆತನಿಂದ ವೈಷಮ್ಯಗಳಿಗೆ ನೀರೆರೆಯುವ ಮತಗಳು ಹುಟ್ಟುವದು ಸಾಧ್ಯವೋ? ಹಾಗಿದ್ದರೆ ಅವನ ದಯಾತತ್ಪರತೆಯಲ್ಲಿ ಕುಂದು ಇರಬೇಕು, ಇಲ್ಲವಾದರೆ **ಅವನ ಹೆಸರಿನಿಂದ ಅನಂತ ಲೋಪಗಳುಳ್ಳ ಮನುಷ್ಯಬುದ್ಧಿಯೇ ಮೆರೆಯುತ್ತಿದ್ದಿರಬೇಕು.** ಎರಡರೊಳಗೊಂದು ಕಾರಣವು ಇದ್ದೇ ತೀರಬೇಕು. ದೇವರ ಮೇಲೆ ದೋಷವನ್ನು ಹೊರಿಸುವದು ಸಾಧುವಲ್ಲವೆಂದು ತೋರಿದರೆ, ತಪ್ಪು ಮನುಷ್ಯನದೇ ಆಗಿರಬೇಕು. ಹಾಗಿದ್ದರೆ ಮನುಷ್ಯನ ತಪ್ಪುಗಳನ್ನು ಮನುಷ್ಯನೇ ದೇಶಕಾಲಪರಿಸ್ಥಿತಿಪ್ರಗತಿಗಳ ದೃಷ್ಟಿಯಿಂದ ಏಕೆ ತಿದ್ದಬಾರದು?

ಬೇಕಾದ ಮಾರ್ಪಾಟುಗಳು ಹಿಂದೆ ಆಗಲಿಲ್ಲವೋ? ಆದರೆ ಅವುಗಳೂ ಬುದ್ಧಿಗಿಂತ ಭೇದಕ್ಕೇ ಹೆಚ್ಚಿನ ಗೊಬ್ಬರವನ್ನು ಚಲ್ಲಿವೆ! ಒಂದೇ ಧರ್ಮದೊಳಗೇ ಎಷ್ಟೋ ಭೇದಗಳು! ಮತಮತಾಂತರಗಳು ಮಾತ್ರವೇ ಅಲ್ಲ ನಮ್ಮಲ್ಲಿರುವದು, ಮತಮತಾಂತರಗಳೂ ಎಷ್ಟೋ ಇವೆ. ಒಂದೇ ಧರ್ಮದಲ್ಲಿ ಎಷ್ಟೋ ಭೇದಗಳಿವೆ. ಮತಸ್ಥಾಪಕನು ಕನಸಿನಲ್ಲಿಯೂ ಕಾಣದ ಭೇದಗಳನ್ನು ಅವನ ಅನುಯಾಯಿಗಳು ಉಂಟುಮಾಡಿದ್ದಾರೆ. ಹಿಂದುಗಳಲ್ಲಿಯೇ ಎಷ್ಟೋ ಜಾತಿಗಳು, ಎಷ್ಟೋ ಕುಲಗಳು! ಅವುಗಳಿಂದ ಒಬ್ಬರಿನ್ನೊಬ್ಬರಿಗೆ ನೀಚರು ಅಥವಾ ಉಚ್ಚರು! ಈ ಅನೈಸರ್ಗಿಕ ಕಲ್ಪನೆಯಲ್ಲಿ ಐಕ್ಯಸಾಮರಸ್ಯಗಳ ಸುಳಿವೇ ಇಲ್ಲ. ಹಿಂದುಗಳಲ್ಲಿಗಿಂತ ಸ್ವಲ್ಪ ಹೆಚ್ಚಿನ ಒಗ್ಗಟ್ಟು ಇತರರಲ್ಲಿದ್ದರೂ ಮುಹಮ್ಮದೀಯರಲ್ಲಿಯೂ ಕ್ರೈಸ್ತರಲ್ಲಿಯೂ ಸಹ ಎಷ್ಟೋ ಭೇದಗಳಿವೆ. ಹನಫಿ, ಹಂಬಲಿ, ವಹ್ಹಾಬಿ, ಕಾದಿಯಾನಿ ಇತ್ಯಾದಿ ಇತ್ಯಾದಿ ಎಷ್ಟೋ ಪಂಗಡಗಳು ಮುಸಲ್ಮಾನರಲ್ಲಿಯೂ ಇವೆ. ಅವುಗಳ ಬುಡ ತಿರುಳುಗಳೇ ಗೊತ್ತಿಲ್ಲದೆ ಹೋದರೂ ಹೆಸರಿಗಾಗಿ ಜಗಳವ್ಯಾಜ್ಯಗಳು ಹೊರಗೂ ಕೋರ್ಟಿನಲ್ಲಿಯೂ ಧಾರಾಳವಾಗಿ ಜರುಗುತ್ತಲೇ ಇವೆ. ಕೆಥೊಲಿಕ್, ಪ್ರೊಟೆಸ್ಟಂಟ್, ಮೆಥೊಡಿಸ್ಟ್, ಪ್ರೆಸ್‌ಬಿಟೇರಿಯನ್, ಕ್ವೇಕರ್ ಮುಂತಾದ ಎಷ್ಟೋ ವ್ಯತ್ಯಾಸಗಳಿವೆ ಕ್ರೈಸ್ತರಲ್ಲಿಯೂ. ಇವೇ ಅಲ್ಲದೆ ಮಿಷನ್ ಮಿಷನ್‌ಗಳಲ್ಲಿಯೂ ಎಷ್ಟೋ ಭೇದಗಳಿವೆ. 'ಆದರೂ ಎಲ್ಲ ಹಿಂದುಗಳಿಗೂ ವೇದವೇ ಮುಖ್ಯವಲ್ಲವೆ? ವೇದಗಳಲ್ಲಿ ಎಲ್ಲ ಭೇದಗಳೂ ಒಂದಾಗುವದಿಲ್ಲವೋ?' ಎಂದು ಕೆಲವರು ಕೇಳುತ್ತಾರೆ. ವೇದಗಳಿಂದ ಸ್ಮಾರ್ತ, ವೈಷ್ಣವ, ಶ್ರೀವೈಷ್ಣವ, ಸೌರ, ಗಾಣಪತ್ಯ, ಶಾಕ್ತ, ಶೈವ ಇತ್ಯಾದಿ ಮತಗಳು ಹೊರಟದ್ದೇನೋ ಕಾಣುತ್ತವೆ. ಪ್ರತಿಯೊಂದೂ ತನ್ನ ಮೂಲವು ವೇದದಲ್ಲಿಯೇ ಇದೆ ಎಂದು ತೋರಿಸುವದಕ್ಕಾಗಿ ಇತರ ಸಾಂಪ್ರದಾಯಗಳೊಡನೆ ಒಡೆದಾಡುತ್ತಿರುವದೇನೋ ಕಾಣುತ್ತದೆ. ಆದರೆ ವೇದಕ್ಕಾಗಿ ಭೇದ ಜಗಳಾಟವನ್ನು ಬಿಟ್ಟು ಪ್ರೇಮದಿಂದ ಬೆಳೆದು ಮತ್ತೆ ಎಲ್ಲವೂ ವೇದದಲ್ಲಿಯೇ ಲೀನವಾದದ್ದು ಮಾತ್ರ ಎಲ್ಲಿಯೂ ಕಾಣಬಂದಿಲ್ಲ. ಹಾಗೆಯೇ

ಮತಮತಾಂತರಗಳು.

ಕ್ರೈಸ್ತ ಮುಹಮ್ಮದೀಯ ಮತದ ಶಾಖೆಗಳೂ **ಹೊರಟು ಎರಡಾಗಿವೆಯೇ ಹೊರತು ಮತ್ತೆ ಸೇರಿ ಯಾವವೂ ಪರಸ್ಪರ ಗೌರವದಿಂದ ಮೂಲದಲ್ಲಿಯೇ ಒಂದಾಗಲಿಲ್ಲ. ಭೇದವೇ ಹೆಚ್ಚಾಗಿದೆಯಲ್ಲದೆ ಬೋಧವು ಬೆಳೆಯಲಿಲ್ಲ.** ಇದಕ್ಕೆ ಇತಿಹಾಸವೇ ಸಾಕ್ಷಿ. ಯಾರೂ ಕಷ್ಟಪಟ್ಟು ಊಹಿಸಬೇಕಾಗಿಲ್ಲ, ಕಣ್ಣು ಮುಚ್ಚಿ ನಂಬಬೇಕಾಗಿಯೂ ಇಲ್ಲ.

ಹೀಗಾಗಲಿಕ್ಕೆ ಕಾರಣವೇನು? ಮತಗಳ ಉದ್ದಿಶ್ಯವನ್ನೇ ನಿಂದಿಸಬಹುದೇ? ಮತಸ್ಥಾಪಕರ ಗಮ್ಯವು ಲೋಕಹಿತವಾಗಿಯೇ ಇದ್ದಿರಬೇಕು. ಅವರ ಚರಿತ್ರದ ಇತಿಹಾಸವನ್ನು ನೋಡಿದರೆ ಅದು ಬಹಳ ಉದಾರವಾಗಿತ್ತೆಂಬದು ಸ್ಪಷ್ಟವಾಗಿ ತೋರುತ್ತದೆ. ಅವರ ಹೃದಯವು ಇತರರ ದುಃಖಕ್ಕಾಗಿ ಕರಗಿ ನೀರಾಗುತ್ತಿತ್ತೆಂಬದರಲ್ಲಿ ಸಂದೇಹವಿಲ್ಲ. ಆದರೆ ಗಮ್ಯ ಮತ್ತು ಹೃದಯಗಳು ಎಷ್ಟು ಉಚ್ಚವಾಗಿದ್ದರೂ ಬಂದ ಪ್ರಮೇಯಗಳನ್ನು ಬಿಡಿಸಲಿಕ್ಕೆ ಇವು ಮಾತ್ರವೇ ಸಾಲುವದಿಲ್ಲ. ವಿಚಾರವು ಬೇಕು; ಪ್ರಪಂಚದ ಅನುಭವವೂ ಬೇಕು.

**ಅಧಿಕಾರವೆಲ್ಲಿದೆ?**

ಇವೆರಡು ಇಲ್ಲದಿರುವಲ್ಲಿ ಹೃದಯವು ಎಷ್ಟು ಉದಾರವಾಗಿದ್ದರೂ ಉಪದೇಶ ಕೊಡಲಿಕ್ಕೆ ಮಾತ್ರ ಅದು ಅರ್ಹವಲ್ಲ. ಒಂದು ವೇಳೆ ವಿಚಾರಶಕ್ತಿಯು ಚನ್ನಾಗಿದ್ದರೂ ಪ್ರಪಂಚದ ಅನುಭವವೂ ವಿಶಾಲವಾಗಿಲ್ಲವಾದರೆ ಆ ಶಕ್ತಿಯು ಪ್ರಪಂಚಕ್ಕಾಗಿ ವ್ಯರ್ಥವೇ. ಯಾಕೆಂದರೆ ಆ ಶಕ್ತಿಯು ತತ್ತ್ವವಿಷಯಕವಾಗಿದೆ. ಉಪದೇಶವು ಕರ್ಮವಿಷಯಕವಾಗಿದೆ. ಅದು ವ್ಯಕ್ತಿಗೆ ಸಂಬಂಧಿಸಿದ್ದು; ಇದು ಸಂಘಕ್ಕೆ.

ಈ ಪ್ರಪಂಚಾನುಭವವು ಧರ್ಮಕರ್ತರಿಗೆ ಈಗಿನಷ್ಟಿತ್ತೋ ಎಂದು ವಿಚಾರಿಸೋಣ. ಒಂದು ಕಡೆ ಭೌತಿಕ, ಆರ್ಥಿಕ, ಸಾಮಾಜಿಕ ಶಾಸ್ತ್ರಗಳು ಈ ಕಾಲದಲ್ಲಿ ಹೇಗೆ ಹೆಚ್ಚುತ್ತ ಪ್ರವಹಿಸುತ್ತಲಿವೆಯೋ ಹಾಗೆ ಎಂದೂ ಇದ್ದಂತೆ ಯಾವ ಇತಿಹಾಸವೂ ತೋರಿಸುವದಿಲ್ಲ. ಹಿಂದೆ ಇವು ಇದ್ದೇ ಇದ್ದಿಲ್ಲವೆಂದು ಹೇಳಲಿಕ್ಕೂ ಆಗುವದಿಲ್ಲ. ಅಲ್ಲಲ್ಲಿ ಹಲಕೆಲವರು ಈ ವಿಷಯಗಳನ್ನು ವಿಚಾರಿಸಿ ಬರೆ

ದಿದ್ದರು. ಆದರೆ ಅವರ ಸಂಕುಚಿತ ವಿಚಾರಮತಗಳಿಗೂ ನಮ್ಮ ಈಗಿನ ವಿಶಾಲ ವ್ಯವಹಾರಕ್ಕೂ ಅಜಗಜಾಂತರವಿದೆ. ಕಾರಣಗಳೇನೆಂದರೆ:– (೧) ಆ ಕಾಲದಲ್ಲಿ ಭೌತಿಕ ಶಾಸ್ತ್ರಗಳಲ್ಲಿ ಈಗಿನಷ್ಟು ಗೌರವವಿರಲಿಲ್ಲ. (೨) ಗೌರವವಿದ್ದಲ್ಲಿ ಸಾಕಷ್ಟು ಪ್ರೋತ್ಸಾಹವಿರಲಿಲ್ಲ. (೩) ಇಷ್ಟೇ ಅಲ್ಲ– ಶೋಧಪರೀಕ್ಷಣಗಳಿಗಾಗಿ ಈಗಿನ ವಿಶಾಲತೆಯೂ ಅನುಕೂಲತೆಯೂ ಇರಲಿಲ್ಲ. ೧–೨ ರ ಕಾರಣಗಳನ್ನು ತಿಳಕೊಳ್ಳುವದರಲ್ಲಿ ಕಷ್ಟವೇನೂ ಇಲ್ಲ. ಜನಸಾಮಾನ್ಯವು ಎಲ್ಲ ಸುದ್ದಿಗಳಿಗಾಗಿಯೂ ಪರವನ್ನೇ ನೋಡುತ್ತಿತ್ತು. ಇಹದ ಕಡೆ ಅಲಕ್ಷವಿತ್ತು. ಆದರೆ ಇಹವನ್ನು ಬಿಡಲಿಕ್ಕಾಗುವದೋ? ಇಲ್ಲಿಯ ಜೀವನವು ಅನಿವಾರ್ಯವಾಗಿದೆ. ಇಂತಹ ಜೀವನಸೂತ್ರದಿಂದಾದ ಫಲವೇನು? **ಇಹವು ಪರದ ಸೋಪಾನವಾಗಿ ಪರಿಣಮಿಸಲಿಲ್ಲ.** ಯಾಕೆಂದರೆ ತಾತ್ಸಾರ ಆಲಸ್ಯಗಳು ಮುಕ್ತಿ ಸೋಪಾನಗಳಲ್ಲ. ಇಹವು ಪರಕ್ಕನುಕೂಲವಾಗಿ ಪರಿಣಮಿಸಬೇಕಾದರೆ 'ಯೋಗಃಕರ್ಮಸು ಕೌಶಲಂ'* ಎಂಬದನ್ನು ಮರೆಯಬಾರದು. ಇಲ್ಲಿ ಮಾಡಬೇಕಾದ ಕರ್ತವ್ಯವನ್ನು ಸೊಗಸಾಗಿ ಮನಸಾರೆ ಮಾಡಬೇಕು. ಹೀಗೆ ಮಾಡೋಣದರಿಂದ ಮಾತ್ರ ಮನಸ್ಸು ಅರಳುವದು, ಬಲಗೊಳ್ಳುವದು; ಅಲ್ಲಿಂದ ಸೂಕ್ಷ್ಮವಾದ ಪಾರಮಾರ್ಥಿಕ ವಿಚಾರಗಳನ್ನು ತಿಳಕೊಳ್ಳುವ ಯೋಗ್ಯತೆಯನ್ನು ಪಡೆಯುವದು. ಹಾಗಿಲ್ಲದೆ, ಏನೋ ಸಾವುಬಾರದೆ ಸಾಯಲಾರದೆ ಆಯುಷ್ಯವನ್ನು ತಳ್ಳುವ ಜೀವಿತದಲ್ಲಿ ಪರದ ನೆರಳಾದರೂ ಹೇಗೆ, ಎಲ್ಲಿಂದ ಬಂದೀತು! ಅಂಥ ಜೀವಿತದಲ್ಲಿ ಇರುವದು ಅಜ್ಞಾನ ಒಂದೇ; ಮತ್ತು ಅದರ ಲಕ್ಷಣವೆಂದರೆ ದೌರ್ಬಲ್ಯ, ಸಾರ್ವತ್ರಿಕ ದಾಸ್ಯದ ಮೂಲ. 'ಜೀವಿತವು ಎಂದರೆ ಒಂದು ಪ್ರಯಾಣ; ಈ ಲೋಕವೆಂದರೆ ಹಾದಿಯಲ್ಲಿ ಒಂದು ಛತ್ರದಲ್ಲಿ ಇಳಕೊಂಡಂತೆ; ಆದುದರಿಂದ ಇಲ್ಲಿ ಮಾಡತಕ್ಕದ್ದೇನೂ ಇಲ್ಲ; ಎಲ್ಲ ಮಾಯಾಜಾಲವೇ' ಎಂದು ಆಕಳಿಸುತ್ತ ತಳ್ಳುವ ಜೀವನಕ್ಕೆ ಪಂಚಭೂತಗಳೇ ಅಶಾಶ್ವತವಾಗಿದ್ದ ಮೇಲೆ ಅವುಗಳ ಶಾಸ್ತ್ರ

ಆಸಕ್ತಿಗಳು.

* ಭಗವದ್ಗೀತೆ ೨—೫೦

ವೇಕೆ, ತಿಳವಳಿಕೆಯೇಕೆ? ಇಂಥ ಮನೋಗತಿಯು ಜೀವನವೃಕ್ಷಕ್ಕೆ ಹುಳಹಿಡಿದಂತೆ. ಇದು ಪ್ರತಿಯೊಂದು ವಿಧವಾದ ಜ್ಞಾನಕ್ಕೂ ಕೊಡಲಿಯಿದ್ದಂತೆ. ಜೀವಿಯ ಜನ್ಮಸಿದ್ಧ ಹಕ್ಕು ಆಗಿರುವ ಸುಖ ಸೌಭಾಗ್ಯ ವಿಕಾಸಗಳಿಗೆ ಕ್ಷಯಹಿಡಿದಂತೆ.

ಭೌತಿಕಶಾಸ್ತ್ರದ ವಿಚಾರವಾಗಿ ಹೀಗೆ ಅಸಡ್ಡೆ. ಮುಂದೆ ಆರ್ಥಿಕಶಾಸ್ತ್ರದ ಗತಿಯೇನು? ದುಡ್ಡೂ ಒಂದು ಭೌತಿಕ ವಸ್ತುವೇ ಅಲ್ಲವೇ? ಆದರೆ ಹೊಟ್ಟೆಬಟ್ಟೆಗಳ ಕಾಟವೇನೋ ಬಿಟ್ಟದ್ದಲ್ಲವಷ್ಟೇ? ಅಷ್ಟೇ ಏಕೆ, ಮದುವೆ ಮನೆ ಮಕ್ಕಳೂ ಬೇಕು. ಹೊಟ್ಟೆಬಟ್ಟೆ ಮನೆಮಾರುಗಳು ಇಲ್ಲವಾದರೂ ಮದುವೆ ಮಕ್ಕಳೇನೋ ಬೇಕೇಬೇಕು! ಯಾಕೆಂದರೆ ಮದುವೆಯೂ ಒಂದು ಧರ್ಮವೇ! ಮಕ್ಕಳಿಲ್ಲವಾದರೆ ಮುಕ್ತಿಯಿಲ್ಲವಂತೆ! ನಾಳೆ ಪಿಂಡ ಇಡುವವರು ಬೇಕೇಬೇಕಲ್ಲವೇ? ಆದರೆ ಇವೆಲ್ಲಕ್ಕೂ ಅರ್ಥವೂ ಬೇಕು. ಅದಿಲ್ಲದೆ ನಡೆಯುವದೇ ಇಲ್ಲ. ಅದನ್ನು ಹೇಗೆ ಪಡೆಯಬೇಕು? ಅರ್ಥವು ಬೆಳೆಯಬೇಕೆಂಬ ವಿಚಾರವೇನೋ ಇವರಿಗೆ ಧರ್ಮವಿರುದ್ಧವಾಯಿತು! ಬೇಕಾದಾಗ ಎಳೆಯಬೇಕು ಬೇರೆಯವರ ಜೇಬಿನಿಂದೀಗ. ಇದು ಅಧರ್ಮವಲ್ಲ. ತಿರುಪೆ ಎತ್ತಿಯಾದರೂ ಮದುವೆಮಾಡಬೇಕು. ಇದು ಧರ್ಮವೇ! ಆದರೆ ರಟ್ಟೆಮುರಿದು ಕೆಲಸಮಾಡಿ ಧನವನ್ನು ಬೆಳೆಸಬಾರದು ಈ ಪ್ರಪಂಚದಲ್ಲಿ! **ಇಂಥ ಅವಿಚಾರದಿಂದ ಧನವನ್ನು ಎಳೆಯುವವರು ಹೆಚ್ಚಿದರು. ಬೆಳೆಸುವವರು ಕಡಿಮೆಯಾಗುತ್ತ ಹೋದರು.** ದೇಶಕ್ಕೆ ಇಂಥ ಧರ್ಮಬುದ್ಧಿಯಿಂದ ರಾಹು ಬಡೆಯಿತು. ಅಷ್ಟೇ ಅಲ್ಲ, ಅರ್ಥವಿಲ್ಲದ ಧರ್ಮಕ್ಕೆ ಯಾವಾಗ ಜನಾಂಗವು ಬಗ್ಗಿತೋ, ಅರ್ಥವಿಲ್ಲದ ತಿರುಕ ಸೋಮಾರಿ ಬಾಯಿಬಡಕರಿಗೆ ಮಾನವು ಹೆಚ್ಚಿತು. ಅವರು ಉತ್ತಮರಾಗಿ ಇವರಿಗೆ ಗುರುಗಳಾದರು; ಬೋಧಕರಾದರು. ಧನವನ್ನು ಹಣೆಯೊರಿಸಿ ಹುಟ್ಟಿಸಿ ಬೆಳೆಸುವವರು ಕೀಳುಜಾತಿಯವರಾದರು! ಯಾಕೆಂದರೆ ಅವರು ಅಶಾಶ್ವತ ಅರ್ಥದ ಹಿಂದೆ ಬಿದ್ದಿದ್ದಾರಲ್ಲವೆ? ಅಂಥವರಿಗೆ ಉಚ್ಚ ತರಗತಿಯು ಹೇಗೆ ಬಂದೀತು? ಅವರಿಗೆ ಕೈಯೊಡ್ಡಿ ತಿರುಪೆಯೆತ್ತುವ ಅಧಿಕಾರವದು ಹಿರಿತನ

ವೆಂದರೆ! ಎಂತಹ ವಿಪರೀತಸ್ಥಿತಿಯಿದು! ಭೌತಿಕಶಾಸ್ತ್ರ ಆರ್ಥಿಕ ಶಾಸ್ತ್ರ ಮುಂತಾದ ಐಹಿಕ ವಿಷಯಗಳ ಹಿಂದೆ ಬಿದ್ದವರು ತುಚ್ಛ

ಅನೈಸರ್ಗಿಕಭೇದ ಮೂಲಗಳು.

ಜನರಾದರು! ಅವರ ವೃತ್ತಿಯು ಆಸುರಿವೃತ್ತಿಯಾಯಿತು. ಅವರು ಅಸುರರಾದರು. * ಅವರು ಧರ್ಮಕ್ಕೆ ಅನರ್ಹರಾದರು. ಅಂಥವರು ತಾವು ಮಾಡಿದ ಪಾಪವನ್ನು ತೊಳೆಯಬೇಕಾದರೆ ಈ ಪ್ರಬೋಧಕರಿಗೆ-ಧರ್ಮಾತ್ಮರಿಗೆ ಧನಧಾನ್ಯಗಳನ್ನು ಅಳೆಯಬೇಕು. ತಮ್ಮ ಧನದಿಂದ ಇವರನ್ನು ಬೆಳೆಸಬೇಕು, ಇಲ್ಲವಾದರೆ ತಮ್ಮ ಲೌಕಿಕ ಕರ್ಮಫಲದ ಚಿರಂಡಿಯಲ್ಲಿ ಅವರು ಕೊಳೆಯಬೇಕು! ಮತ್ತು ಧರ್ಮಾತ್ಮರೆಂದರೆ ಯಾರು? ಜುಟ್ಟುಜನಿವಾರಗಳು ಮಾತ್ರವೇ ಸಾಲವು ಹಾಗೆನ್ನಿಸಲಿಕ್ಕೆ. ಯಾಕೆಂದರೆ, ಅವುಗಳಿಂದ ಅಲಂಕೃತರಾಗುವ ಅನುಮತಿಯು ಲೌಕಿಕದಲ್ಲಿ ಬಿದ್ದು ಧನವನ್ನು ಗಳಿಸಿ ಬೆಳೆಸುವವರಲ್ಲಿಯೂ ಹಲಕೆಲವರಿಗಿದೆ. ಆದರೆ ಅವರಿಗೆ ವೇದಾಧಿಕಾರವಿಲ್ಲ! ಆದುದರಿಂದ ಪೂರ್ಣ ಧರ್ಮಾತ್ಮರೆಂದರೆ ವೇದಾಧಿಕಾರವುಳ್ಳವರು! ಶಾಲೆ ಹುಡುಗರು ಮಗ್ಗಿಕೋಷ್ಟಕಗಳನ್ನು ಒಪ್ಪಿಸಿದಂತೆ ಕೆಲವು ಮಂತ್ರ ಶ್ಲೋಕಗಳನ್ನು ಹೇಳಲಿಕ್ಕೆ ಬರಬೇಕು, ಉತ್ತಮವರ್ಣದವರಾಗಲಿಕ್ಕೆ. (ಈ ಕಾಲದಲ್ಲಿ ಇಷ್ಟೂ ಬರುವದಿಲ್ಲ). ಆದುದರಿಂದ ಜನ್ಮದಿಂದಲಾದರೂ ವೇದಾಧಿಕಾರ ಮಾತ್ರ ಇದ್ದರಾಯಿತು ಧರ್ಮಾತ್ಮರಾಗಲಿಕ್ಕೆ. ಅಂಥವರೇ ಸಂಘದಲ್ಲಿ ಉಚ್ಚರು, ಮಾನಾರ್ಹರು. ಹೀಗಿರೋಣದರಿಂದ ಲೌಕಿಕರಿಗೂ ತಮ್ಮ ಕೆಲಸಗಳಲ್ಲಿ ಸಾಕಷ್ಟು ಉತ್ಸಾಹವಿಲ್ಲ. ಅಂದರೆ ಅವರು ತಮ್ಮ ಕೆಲಸವನ್ನು ಬಿಟ್ಟುಬಿಡುತ್ತಾರೆಂದಲ್ಲ. ತಮ್ಮ ಹುಟ್ಟಿಗೇ ಬಂದು ಸೇರಿದ ಕಾರ್ಯವನ್ನು ಅವರು ಹಾಗೇ ಏನೋ ಸಾಗಿಸುತ್ತಾರೆ. ಆದರೆ ಅವರಿಗದರಲ್ಲಿ ಹುರುಪಿಲ್ಲ. ಮಾನವನು ಮಾನಪ್ರಿಯನು. ಅವನಿಗೆ ಮರ್ಯಾದೆಯು ಬೇಕು. ಧನದೊಡನೆ ಅದೂ ಇದ್ದರೆ ಬಂಗಾರಕ್ಕೆ ಒಪ್ಪೆಯೇ. ಧನಕ್ಕಾಗಿ ಮಾನವನ್ನು ಸ್ವಾರ್ಥಿಗಳು ಅವನಿಗೆ ಕೊಡದಿರುವದಿಲ್ಲ. ಆದರೆ ಅದು ತನಗಾಗಿ ಅಲ್ಲ ಎಂಬದು ಆತನಿಗೆ ಗೊತ್ತು. ತನ್ನ ಯೋಗ್ಯ

* ಜಯಕರ್ನಾಟಕ (ಅಸುರ) ಸಂಪುಟ ೮ ಸಂಚಿಕೆ ೧೧ „ಯಾರು ಯಾರು"

ತೆಗಾಗಿ ಗುಣಕ್ಕಾಗಿ ಬಂದ ಮಾನವೇ ಮೇಲಿನದು. ಆದರೆ ಅದವ ನಿಗೆ ತನ್ನ ಹುಟ್ಟಿನಿಂದ ಬರುವದಿಲ್ಲ. ಆದುದರಿಂದ ಭಾರತೀಯ ಸಮಾಜದ, ಅದರ ವಿಪರೀತ ಧರ್ಮದ, ಅದರ ಕುಟಿಲನೀತಿಯ ಪರಿಣಾಮದಿಂದ **ಧನವು ಒಂದು ಕಡೆಯಾಗಿದೆ, ಮಾನವು ಇನ್ನೊಂದು ಕಡೆಯಾಗಿದೆ.** ನಿಜವಾಗಿಯೂ ಸಂಘಹಿತವನ್ನು ಕಾರ್ಯತಃ ಮಾಡುವವರಿಗೆ ಮಾನವು ಕಡಿಮೆ. ಅಂಥವರ ದಾನ ದಲ್ಲಿ, ಆಶ್ರಯದಲ್ಲಿ ಬದುಕಿರುವವರಿಗೆ ಮಾನವು ಹೆಚ್ಚಾಗಿದೆ. ಈ ವೈಪರೀತ್ಯದಿಂದ ಸಂಘಕ್ಕೆ ಮೊಬ್ಬು ಕವಿದಿದೆ. ಆ ಮೊಬ್ಬಿನಲ್ಲಿ ಅದು ಹಿರಿಯರು ಮಾಡಿದ್ದನ್ನೇ ಮಾಡುತ್ತಿರುವದೇ ದೊಡ್ಡ ಧರ್ಮವೆಂದು ಭಾವಿಸಿ ನಡೆಯುತ್ತಿದೆ. ಅದರ ನಡತೆಗೆ ರೂಢಿಯೇ ಆಧಾರ; ಜ್ಞಾನವಲ್ಲ. ಇದರಿಂದ ಭೌತಿಕ ಆರ್ಥಿಕ ವಿಷಯಗಳಿಗೆ ಪಂಗು ನಾಮ ಬಿತ್ತು.

ಧನಮಾನಗಳ ಸ್ಥಿತಿಗತಿಯು ಹೀಗೆ ಅನೈಸರ್ಗಿಕವಾಗಿರುವಲ್ಲಿ ಸಂಘದ ಸ್ಥಿತಿಗತಿಯೂ ಹಾಗೆಯೇ ಇರಬೇಕು. ಕೃತ್ರಿಮ ನೀತಿರೀತಿ ಗಳಲ್ಲಿ ಸುಲಭವಾದ ಸಹಜವಾದ ಕಟ್ಟು ಇಲ್ಲ. ಪ್ರಕೃತಿ ವಿರುದ್ಧ ವಾದ ಯಾವ ವ್ಯವಸ್ಥೆಯೂ ದೋಷರಹಿತವಾಗಿದ್ದು ಬಹುಕಾಲ ಬಾಳಿರಲಾರದು. ಅಷ್ಟೇಕೆ, ಅದಕ್ಕೆ ವ್ಯವಸ್ಥೆಯೆನ್ನುವದೇ ತಪ್ಪು. ಅದು ಕೆಲಕಾಲ ನಮಗೆ ಅನುಕೂಲತೆಯನ್ನು ಕೊಡುವದಾದರೂ ಅದರ ತಿರುಳಿನಲ್ಲಿ ಅವ್ಯವಸ್ಥೆಯೇ ತುಂಬಿರುತ್ತದೆ. ಅಂಥ ಅನುಕೂ ಲತೆಯಲ್ಲಿ ಮುಂದಿನ ಹಾನಿಯೂ ಅಡಕವಾಗಿದೆ. ಯಾಕೆಂದರೆ ಅದು ಅನೈಸರ್ಗಿಕವಾಗಿದೆ. ನಿಸರ್ಗವಿರುದ್ಧವಾಗಿರುವ ಪ್ರತಿಯೊಂದು ವಿಚಾರ ವಾಕ್ ಕಾರ್ಯದಲ್ಲಿಯೂ ದುಷ್ಟ ಪ್ರತಿಕ್ರಿಯೆಯು, ಪರಿಣಾ ಮವು ಅವಿತುಕೊಂಡಿರಲೇ ಬೇಕು. ನಿರ್ಮಾಣವೇ ಹಾಗಿದೆ. ಸಮಾ ಜವೆಂದರೆ ಕೆಲವು ಕಟ್ಟುಪಾಟುಗಳಿಂದ ಕೂಡಿರುವ ಜನಸಮೂಹ. ಈ ಕಟ್ಟುಪಾಟುಗಳು **ಅವಸರದಿಂದ ಹುಟ್ಟಿರಬಹುದು, ಪ್ರಕೃತಿ ತತ್ತ್ವಗಳ ವಿಚಾರವನ್ನವಲಂಬಿಸಿಕೊಂಡೂ ಇರಬಹುದು.** ಅವಸ ರಕ್ಕಾಗಿ ಏರ್ಪಟ್ಟವುಗಳು ತಾತ್ಕಾಲಿಕ ಸುಖವನ್ನು ಕೊಡುತ್ತವೆ.

ಯಾವ ಪರಿಸ್ಥಿತಿಯ ಒತ್ತಾಯದಿಂದ ಅವು ಹುಟ್ಟಿವೆಯೋ ಅದು ಹೋದೊಡನೆ ಇವುಗಳು ಹೆಣಗಳೇ. ಅವನ್ನು ಮತ್ತೆ ಹಾಗೆಯೇ ಅವುಗಳ ಪ್ರಾಚೀನತೆಗಾಗಿ ಇಡೋಣದರಿಂದ ಲಭಿಸುವದು ಸುಖವಲ್ಲ, ಹಾನಿ. ಅವು ಕೊಳೆತು ಸಂಘದಲ್ಲೆಲ್ಲ ಅವುಗಳ ದುರ್ವಾಸನೆಯು ಹಬ್ಬುವದು. ದೃಷ್ಟಾಂತಕ್ಕೆ, ಜನರ ಸೊತ್ತು ಸುರಕ್ಷಿತವಾಗಿ ಎಲ್ಲಿ ಇರಲಾರದೋ ಅಲ್ಲಿ ಅದನ್ನು ಬಚ್ಚಿಡುವದು, ಹೂಳಿಡುವದು ನ್ಯಾಯವೇ. ಅದೇ, ವಾತಾವರಣವು ಅಭಯವನ್ನುಸಿರುವಾಗಲೂ ಹಾಗೆಯೇ ಬಚ್ಚಿಡುವದು ಅವಿಚಾರ. ಯಾಕೆಂದರೆ ಹಾಗಿಡೋಣದರಿಂದ ಉಪಯೋಗವೇನು? ಆ ಧನದಿಂದ ಯಜಮಾನನಿಗೂ ಉಪಯೋಗವಿಲ್ಲ, ಇತರರಿಗೂ ಇಲ್ಲ. ಆ ಧನವನ್ನು ಬಂಡವಾಳವಾಗಿಟ್ಟು ಉದ್ಯಮಗಳನ್ನು ಹೂಡಿದರೆ ತನಗೂ ಲಾಭ, ಇತರರಿಗೂ ವಿಧವಿಧವಾಗಿ ಲಾಭವಾಗುವದು. ನೈಸರ್ಗಿಕ ದೃಷ್ಟಿಯಿಂದ ನೋಡಿದರೆ ಧನವನ್ನು ಬಳಿಸಿ ಬೆಳೆಸುವದರಲ್ಲಿಯೇ ನ್ಯಾಯವಿದೆ. ಆದರೆ ಪ್ರಾಣಕ್ಕೆ ಬಂದಾಗ ಅವಸರಕ್ಕಾಗಿ ಅದನ್ನೇ ಹೂತಿಡುವದು ಅನ್ಯಾಯವಲ್ಲ.

ಅವಸರ

ಹಾಗೆಯೇ ವೈದ್ಯರು ಕೆಲವು ಔಷಧಗಳಿಗಾಗಿ ಸಾರಾಯಿ, ಅಫೀಮು, ಭಂಗಿ, ಉಮ್ಮತ್ತೆ ಮುಂತಾದ ಮಾದಕ ಪದಾರ್ಥಗಳನ್ನು ಧಾರಾಳವಾಗಿ ವಿನಿಯೋಗಿಸುತ್ತಾರೆ. ರೋಗವು ಪೀಡಿಸುತ್ತಿರುವಾಗ ನಿವಾರಣೆಗಾಗಿ ಅವನ್ನು ನುಂಗಿದರೆ ಅನ್ಯಾಯವಾಗದು. ಯಾಕೆ? ಅವಸರವು ಹಾಗಿದೆ. ಅದೇ, ಆರೋಗ್ಯಸ್ಥಿತಿಯಲ್ಲಿಯೂ ಮಾದಕ ಪದಾರ್ಥಗಳನ್ನುಪಯೋಗಿಸಿದರೆ ಅದು ನ್ಯಾಯವಲ್ಲ. ಮಾನವನ ಪ್ರಕೃತಿಗೆ ಅಂಥ ನಿಶೆಯು ಅನವಶ್ಯಕ. ಆದರಿಂದ ತನುಮನಸ್ಸುಗಳು ಕೆಡುತ್ತವೆ. ಆದರೆ ಅದನ್ನು ಮಿತಿಯಿಂದ, ತಿಳವಳಿಕೆಯಿಂದ ಅವಸರಕ್ಕಾಗಿ ಸೇವಿಸಿದರೆ ಆದು ತಪ್ಪಲ್ಲ. ಪ್ರಾಣಸಂರಕ್ಷಣೆಯೂ ಒಂದು ಪ್ರಕೃತಿಗೇ ಸೇರಿಕೊಂಡಿರುವ ಧರ್ಮವೇಯಲ್ಲವೇ? **ಅವಸರದ ಏರ್ಪಾಡುಗಳು ಒಮ್ಮೆ ಆವಶ್ಯಕವಾಗಿದ್ದರೂ ತಾತ್ಕಾಲಿಕ ಹಿತವನ್ನು ಮಾತ್ರ ಮಾಡಬಲ್ಲವು. ಆದರೆ ಪ್ರಕೃತಿಯ ತತ್ತ್ವಗಳೂ ಅವುಗಳಿಂದಾಗುವ ಹಿತವೂ ತ್ರಿಕಾಲಾಬಾಧಿತವಾಗಿವೆ.** ಅವುಗಳ ಫಲವು ಕೂಡಲೇ ಕೈಸೇರಲಿಕ್ಕಿಲ್ಲ. ಅವುಗಳ

ಸಾಧನದಿಂದ ತೊಂದರೆಯೂ ಆಗಬಹುದು. ಆದರೂ ಅವನ್ನು ಯಥಾರ್ಥವಾಗಿ ಅವಲಂಬಿಸಿದರೆ ಆ ಹಾದಿಯಲ್ಲಿ ಅಪಾಯವಿಲ್ಲ; ಚ್ಯುತಿಯಿಲ್ಲ. ಎರಡು ಎರಡಲು ನಾಲ್ಕು ಹೇಗೆ ಸದಾ ಬದಲಾಗದೆ ಇರುವದೊ ಹಾಗೆಯೇ ನೈಸರ್ಗಿಕ ತತ್ತ್ವಗಳ ಸ್ಥಿತಿ. **ಸಮಾಜದ ಕಟ್ಟುಪಾಟುಗಳು ನಿಸರ್ಗದೊಡನೆ ಹೊಂದಿದಂತೆಲ್ಲ ಅದರ ಸ್ಥಿತಿ ಗತಿ ಪ್ರಗತಿಗಳೂ ಬೆಳೆಯುವವು.** ಹಾಗಿಲ್ಲದೆ, ಅವು ಯಾವದೋ ಒಂದು ಕಾಲದ ಅವಸರದಿಂದ ರೂಪುಗೊಂಡವಾಗಿದ್ದರೆ, ಹೊಂದಿಕೆ ಯಿಲ್ಲದ ಕಾಲದಲ್ಲಿ ಅವು ಅಧೋಗತಿಯನ್ನೇ ತೋರಿಸುವವು. ಅವು ಅನೈಸರ್ಗಿಕವಾಗಿದ್ದರೆ ವಿಕಾಸಕ್ಕೆ ಸಹಕಾರಿಯಾಗಲಾರವು. ಅದಕ್ಕೆ ಬದಲಾಗಿ ತಮಗೆ ಸಂಬಂಧವಿಲ್ಲದ ಬೇರೊಂದು ಕಾಲದಲ್ಲಿ ವೈರಿಗಳಾಗಿ ನಿಂತು ಸಮಾಜವನ್ನು ಕೆಡಿಸುವವು. ಅವಸರವು ಪ್ರಾಣಸಂರಕ್ಷಣೆ ಯನ್ನು ಮಾಡಬಲ್ಲದೆಂಬದು ನಿಜ. ಆದರೆ ಅದು ತತ್ಕಾಲಕ್ಕೇ. ಅಂದು ರಕ್ಷಿತವಾದ ಪ್ರಾಣವು ಮುಂದೆ ಹೊಸ ನೈಸರ್ಗಿಕ ತತ್ತ್ವ ಗಳನ್ನು ಕಂಡುಹಿಡಿದು ಅವುಗಳೊಡನೆ ಹೊಂದಿಕೊಂಡು ಬೆಳೆಯುತ್ತ ಹೋಗಬೇಕು. ಅದೇ ಜೀವಿಯ ಧರ್ಮ. ನಿಂಬೇಕಾಯಿಯು ಹಾಳಾ ಗದಂತೆ ಉಪ್ಪಿನಕಾಯಿ ಮಾಡಬಹುದು. ಅದನ್ನು ಕೊಳೆಯದಂತಿ ಡಲಿಕ್ಕೆ ಉಪ್ಪಿನ ಅವಸರವಿದೆ. ಆದರೆ ಬೆಳೆಯುವಂತೆ ಮಾಡುವ ರೀತಿಯು ಅದಲ್ಲ. ಜಾಡಿಯೊಳಗಿನ ನಿಂಬೆಕಾಯಿಯು ಕೊಳೆಯು ವದಿಲ್ಲವೆಂಬದು ನಿಜ. ಆದರೆ ಅದು ಬೆಳೆಯುವದೂ ಇಲ್ಲ, ತನ್ನ ವಂಶವನ್ನೂ ಬೆಳೆಸಲಾರದು. ಅದರ ಅವಸರದ ರೀತಿಯು ತನ್ನ ವಂಶಕ್ಕೆ ಹಾನಿಕರವಾಗಿದೆ. ಆ ಕಾಯಿಯು ನುಂಗುವವರ ಬಾಯಿ ಗಾಗಿ ಮಾತ್ರ; ಅಲ್ಲದೆ ತಾನು ತಾಯಿಯಾಗಿ ವಂಶವನ್ನುದ್ಧರಿಸ ಲಾರದು. **ಇದ್ದಂತೆಯೇ ಉಳಿಯುವದು ಎಂದರೆ ಅಳಿಯುವದು. ಬೆಳೆಯುವದೇ ಉಳಿಯುವ ಉಪಾಯ.** ಇದೇ ನಿಸರ್ಗದ ರೀತಿ.

ಸಾಮಾಜಿಕ ವಾತಾವರಣವು ಇಷ್ಟು ಅನೈಸರ್ಗಿಕವಾಗಿರುವಲ್ಲಿ ವ್ಯಕ್ತಿಗೆ ಉಚ್ಚಗಮ್ಯವೂ ಯೋಗ್ಯಸ್ಫೂರ್ತಿಯೂ ಇರಲಾರವು.

ಏನೋ ಬದುಕಬೇಕೆಂದು ಬದುಕುವದು. ಯಾರು ಎಲ್ಲಿಯಾದರೂ ಆ ಬದುಕಿಗಾಗಿ ಕೈಕೊಂಡ ವೃತ್ತಿಯಲ್ಲಿ ಅತಿ ತೀರ್ಗಡೆಯನ್ನು ಹೊಂದ ಬೇಕೆಂದರೆ ಆರಿತೋ ಅರಿಯದೆಯೋ ಆ ವಾತಾವರಣವನ್ನೇ ಮರೆ ಯಬೇಕು. ಹಾಗೆ ಬೆಳೆದರೂ ಶಾಂತಿಯಿದೆಯೋ? 'ಅಯ್ಯೋ ನಾನು ಧರ್ಮವನ್ನು ಮರೆತು ಈ ಪ್ರಪಂಚಕ್ಕೇ ಮರುಳಾದೆನಲ್ಲಾ' ಎಂದು ಗೋಳಿಡುತ್ತ ಆ ಪಾಪಪರಿಹಾರಾರ್ಥವಾಗಿ ಪುರಾಣ ಪ್ರವ ಚನ, ಹೋಮ ದಾನ ಜಪತಪ ಬ್ರಾಹ್ಮಣ ಸಂತರ್ಪಣಾದಿಗ ಳನ್ನು ನಡೆಸುತ್ತಿರುವದು! ಮತ್ತೆ, **ಮಾಡಿ ಗಳಿಸಿದ್ದಕ್ಕೆ ಚಿಂತೆ, ಬೇಡಿದ್ದಕ್ಕೆ ಮಾನ!** ಕೊಡುವವನು ನೀಚ, ತಕ್ಕೊಳ್ಳುವವನು ದೊಡ್ಡ ಮನುಷ್ಯ! ವೈಕುಂಠದ್ವಾರದ ಕಾವಲುಗಾರ! ಇದೆಲ್ಲ ಧರ್ಮಕರ್ತರ ತಪ್ಪೋ? ಅವರ ಉದ್ದೇಶವು ಚನ್ನಾಗಿಯೇ ಇದ್ದಿರಬೇಕು ಎಂದು ಮೊದಲೇ ಹೇಳಿದೆಯಷ್ಟೇ. ಆದರೆ ಅವರ ಜ್ಞಾನದಲ್ಲಿಯೂ ಲೋಪವೇ ಇದ್ದಿಲ್ಲವೆಂದು ಹೇಳಲಿಕ್ಕೂ ಆಗದು, ಎಂಬದನ್ನೂ ಹೇಳಿದೆ. ಅಷ್ಟು ಮಾತ್ರವೇ ಅಲ್ಲ. ಅವರ ಗಮ್ಯ ಜ್ಞಾನಗಳು ಒಂದುವೇಳೆ ಉಚ್ಚವಾಗಿದ್ದರೂ ವ್ಯವಹಾರದಲ್ಲಿ ಎಂತೆಂಥ ಅವಸರಗಳು ಅವರಿಗಿದ್ದವೋ ಯಾರು ಬಲ್ಲರು? ಕೇವಲ ವೈಯಕ್ತಿಕ ಭಾವ ಜೀವನಗಳನ್ನು ಬಿಟ್ಟು, ತಮಗೂ ಸಮಾಜಕ್ಕೂ ಇರುವ ನಿಕಟ ಸಂಬಂಧವನ್ನರಿತು, ಅದರ ಸೇವೆಯನ್ನು ಮಾಡಲುದ್ಯುಕ್ತರಾದವರಿಗೆ ಮಾತ್ರ ಈ ಅವಸರಗಳು ಬಿಟ್ಟವೇ ಅಲ್ಲ. ಸಮಾಜವು ಪದೆ ಪದೆ ಬದಲಾಗುವ ಕೂಟ. ಇತರ ವಿಷಯಗಳಲ್ಲಿ ಬದಲಾವಣೆಗಳು ಆಗು ತ್ತಿದ್ದರೂ ಒಂದು ಧರ್ಮವೇನೋ ಬಿಟ್ಟದ್ದಲ್ಲ. ಅದು ಅಂದರೆ ಬದುಕು ವದು; ಸಾಯದಂತೆ ಪ್ರಾಣವನ್ನುಳಿಸಿಕೊಳ್ಳುವದು. ಆದರೆ ಇತರ ಜೀವ ರಾಶಿಗಳಂತೆ ಹೊಟ್ಟೆಹೊರುವದಕ್ಕಾಗಿ ಮಾತ್ರ ಬದುಕುವದು ಮಾನವ ಧರ್ಮವಲ್ಲ. ಮಾನವನು **ಚನ್ನಾಗಿ ಯೋಗ್ಯವಾಗಿ** ಬದುಕ ಬೇಕು, ಎಂದು ಸಕಲ ಮತಗಳೂ ಸಾರುತ್ತವೆ. ಉಪದೇಶವೇನೋ ಉತ್ತಮವಾದದ್ದೇ. ಆದರೆ **ಬದಕುವದು ಮೊದಲು, ಚನ್ನಾಗಿ ಬದ ಕುವದು ಆಮೇಲೆ,** ಅಲ್ಲವೆ? ಬದುಕಿಗೇ ಗತಿಯಿಲ್ಲದೆ ಹೋದರೆ

ಚನ್ನಾಗಿ ಬದುಕುವದಾದರೂ ಹೇಗೆ? ಚನ್ನಾಗಿ ಬದುಕುವದು (ಧರ್ಮ) ಸರ್ವಸಾಮಾನ್ಯ ಬದುಕಿನ ಸೌಕರ್ಯವಿದ್ದಲ್ಲಿ ಮಾತ್ರ ಒಪ್ಪುವ ಉಪದೇಶ. **ಜೀವನಕ್ಕೆ ಉಪಜೀವನವೇ ಮೊದಲನೆಯ ಅವಶ್ಯಕತೆ.** ಧರ್ಮೋಪದೇಶ ಆಮೇಲೆ. ಬರಗಾಲ, ಯುದ್ಧ, ದರೋಡೆ. ಗಳ ಕಾಲದಲ್ಲಿ ಉಪಜೀವನಕ್ಕೇ ಕೇಡು ಬಂದಾಗ ಮತಸ್ಥಾಪಕರು ಮೊದಲು ಉಪಜೀವನದ ಅವಸರಗಳನ್ನು ಗಮನಿಸುವರೋ ಅಥವಾ ತತ್ತ್ವಜ್ಞಾನವನ್ನು ಹೇಳುವರೋ? ಆದರೆ ಅಂಥ ಅವಸರಕ್ಕಾಗಿ ಆವರು ಆಂದು ಕೊಟ್ಟ ಉಪದೇಶವು ಇಂದೂ ನಮಗೆ ಉಪಯೋಗಕರವಾದೀತೋ? ಮತಸ್ಥಾಪಕರ ಉಪದೇಶಗಳಲ್ಲಿ ಇಂಥ ಅವಸರಗಳಿಂದ ಹುಟ್ಟಿದ ಉಪದೇಶಗಳೆಷ್ಟಿವೆಯೋ ಯಾರು ಬಲ್ಲರು? ತಾತ್ತ್ವಿಕ ಉಪದೇಶಗಳನ್ನು ಬಿಟ್ಟರೆ ಉಳಿಕೆಯವು ಹೆಚ್ಚಾಗಿ ಅವಸರದಿಂದಲೇ ಹುಟ್ಟುತ್ತವೆ. **ಅವಸರವು ಉಪಜೀವನವನ್ನೇ ಬೆದರಿಸುವ ಪರಿಸ್ಥಿತಿಯಿಂದುಂಟಾಗುತ್ತದೆ.** ಆ ಪರಿಸ್ಥಿತಿಯ ಚರಿತ್ರೆಯು ನಮಗೆ ಗೊತ್ತೋ? ಅದು ಮತಗ್ರಂಥಗಳಲ್ಲಿ ಸಾಕಷ್ಟಿದೆಯೋ? ಅವುಗಳಲ್ಲಿ ಉಪದೇಶವಿದೆಯೇ ಹೊರತು ಆ ಕಾಲಗಳ ಇತಿಹಾಸವಿಲ್ಲ. ಹೀಗಿರುವಾಗ ಅವುಗಳನ್ನರಿತುಕೊಂಡು ಅಂಥ ಅರಿವಿನ ಮೂಲಕ ಆ ಸೂತ್ರಗಳ ನೀತಿರೀತಿಗಳ ಆಧಾರದ ಮೇಲೆ ಇಂದಿನ ಅವಸರಗಳಿಗೆ ತಕ್ಕ ನೀತಿರೀತಿಗಳನ್ನು ಮಾಡುವ, ಎಂದರೆ ಸಾಧ್ಯವಲ್ಲ. ಯಾಕೆ? ಆ ಉಪದೇಶಗಳ ಉಗಮವು ನಮ್ಮ ಬುದ್ಧಿಗೆ ಸಿಕ್ಕುವದಿಲ್ಲ. ಆದರ ಇತಿಹಾಸದ ಅಭಾವವು ಅಂದಿನ ಅವಸರದ ಧರ್ಮಸೂತ್ರಗಳನ್ನು ಕೆಲಸಕ್ಕೆ ಬಾರದಂತೆ ಮಾಡಿದೆ. ಅಂದಮೇಲೆ ಅಂಥ ಸೂತ್ರಗಳನ್ನು ಇಂದು ಹಿಡಿದುಕೊಂಡು ನಡೆದರೆ ಗತಿಯು ದುರ್ಗತಿಯೇ ಅಲ್ಲವೆ? ಎಲ್ಲ ಮತಗ್ರಂಥಗಳಲ್ಲಿಯೂ ಎರಡು ಪ್ರಕಾರವಾದ ಉಪದೇಶಗಳಿವೆ. **ತತ್ತ್ವಜ್ಞಾನಪರ ಉಪದೇಶಗಳು ಒಂದು ಕಡೆ ಇದ್ದರೆ ಅಪರಿಹಾರ್ಯತ್ವಪರ ಉಪದೇಶಗಳೂ ಇನ್ನೊಂದು ಕಡೆ ಇವೆ.** ಒಂದು ಕಡೆ ಅವುಗಳಲ್ಲಿ ಶಾಶ್ವತ ದೀಪಿಕೆಯಿದ್ದರೆ ಇನೊಂದು ಕಡೆ ವಿಪತ್ಸ

ಆಪದ್ಧರ್ಮ ಮತ್ತು ನಿಜಧರ್ಮ

ಮುಯೋಚಿತ ಓಣಿಗಳೂ ಇವೆ. ಆಪತ್ ಧರ್ಮವಿವೆ. ಒಂದು ಕಡೆ ಯುಕ್ತ, ಸರ್ವಸಮ್ಮತವಾಗಿರುವ ವಿಷಯಗಳು ಇದ್ದರೆ ಇನ್ನೊಂದು ಕಡೆ ಇತರ ಕಾಲಜನಗಳಿಗೆ ಅಸಮ್ಮತವಾದ ಅಸಂಬದ್ಧವಾದ ಅಪಕಾರಕವಾಗಿ ರುವ ವಿಷಯಗಳೂ ಇವೆ. ಇವನ್ನು ವಿಂಗಡಿಸಬೇಕೋ? ಬೇಡವೋ? ಹಾಗೆ ಮಾಡಬೇಕಾದರೆ ಉಪಾಯವು ಯಾವದು? **ಅದು ಬುದ್ಧಿಗೇ ಸೇರಿದ ಧರ್ಮವಲ್ಲವೇ?**

ಈ ಆವಸರದ ಸೂತ್ರಗಳಲ್ಲಿಗೇ ಮತಶಾಸ್ತ್ರಗಳು ಮುಗಿಯು ವದಿಲ್ಲ. ವೇದ, ಜಂದವಸ್ತಾ, ಬೈಬಲ್, ಕುರಾನ್ ಇವುಗಳಲ್ಲಿ ನಾನಾ ವಿಷಯಗಳಿವೆ. ಆದರೆ ಅವುಗಳನ್ನುಂಟುಮಾಡಿದವರು ವಿಂಗ ಡಿಸಿಟ್ಟ ಅಧ್ಯಾಯಗಳನ್ನು ತುಸು ಹೊತ್ತು ಬದಿಗಿಟ್ಟು ವಿಷಯಾನು ಸಾರ ಹೊಸ ಪರಿಚ್ಛೇದ ಮಾಡಿವರೆ ಪ್ರತಿ ಗ್ರಂಥಕ್ಕೂ ಆರು ಪರಿ ಚ್ಛೇದಗಳಾಗುವಂತೆ ತೋರುತ್ತದೆ. (೧) ಭೌತಿಕ ಜಗತ್ತಿನ ಆದಿ ಉದ್ಭವ ಮತ್ತು ವಿಕಾಸ; (೨) ಜೀವದ ಮೂಲ- ಆದರಲ್ಲಿಯೂ ಮನುಷ್ಯನದು; (೩) ಮನುಷ್ಯನಿಗೂ ಜಗತ್ತಿಗೂ ಇರುವ ಸಂಬಂಧ; (೪) ಮನುಷ್ಯನ ಪ್ರಕೃತಿ ಮತ್ತು ಆದಕ್ಕನುಸಾರವಾದ ನೀತಿ (೫) ಮನುಷ್ಯ ಜೀವನದ ಅರ್ಥ; (೬) ಮನುಷ್ಯನು ಇವುಗಳೊಡನೆ ಹೊಂದಿ ಕೆಯಿಂದಿದ್ದು ಮುಕ್ತನಾಗುವಂತೆ ಆತನು ಅನುಸರಿಸ ತಕ್ಕ ಭಾವವಾಕ್ ವಿಚಾರಕರ್ಮಗಳು. **ವಿಷಯ ವಿಭಾಗಗಳು ವ್ಯವಸ್ಥೆಯಿಂದಿದ್ದರೆ ಹೀಗೆ ಆರು ಅಧ್ಯಾಯಗಳಾಗಬೇಕು.** ಅವರು ಬರೆದ ವಿಷಯ

ಅನುಭವವೋ?

ಅಂದಾಜೋ?

ಗಳಿಗೆ ಆಧಾರವೇನು? ಪರೀಕ್ಷಣ ಅನುಭವಗಳಲ್ಲ. ಎಲ್ಲರೂ ಕಣ್ಣು ಬುದ್ಧಿ ಗಳಿಂದ ನೋಡಿ ಮನವರಿಕೆ ಮಾಡಿಕೊಳ್ಳತಕ್ಕ ವಿಧಾನವಿಲ್ಲ. ಅನೇಕ ವಿಷಯಗಳನ್ನು ಹಿರಿಯರಲ್ಲಿಯ ಗೌರವಕ್ಕಾಗಿ ವಿವೇಚಿಸದೆಯೇ ನಂಬ ಬೇಕು. ಅವನ್ನು ಹೇಳಲಿಕ್ಕೆ ಹಿರಿಯರಿಗೆ ಅಧಿಕಾರವೆಲ್ಲಿಂದ ಬಂತು? 'ಅವರು ಮಹಾನುಭಾವರಾಗಿದ್ದರು, ಎಲ್ಲವನ್ನೂ ತಿಳಿದವರಾಗಿದ್ದರು'! ಎಂಬ ಉತ್ತರವೇ ಎಲ್ಲ ಪ್ರಾಚೀನಮತಪೂಜಕರಿಂದಲೂ ದೊರೆಯು ವದು! ಇದು ನಮ್ಮ ಪ್ರಶ್ನೆಗೆ ಉತ್ತರವೋ? ಮತ್ತೆ ಆ ಪ್ರಶ್ನೆಯನ್ನೇ ಹೊರಡಿಸುವ ಉತ್ತರವಿದು! ಅವರು ಹೇಗೆ ಮಹಾನುಭಾವರಾದರು,

ಎಂದು ಮತ್ತೂ ಹಾಗೇ ಕೇಳಬಹುದಲ್ಲವೆ? ಅವರ ಜ್ಞಾನಕ್ಕೆ ಮಾನವ ಜೀವಿಗೆ ಮುಖ್ಯ ಮತ್ತು ಸಾಮಾನ್ಯವಾಗಿರುವ ಬುದ್ಧಿಯು ಅಷ್ಟು ಆಧಾರವಾಗಿಲ್ಲವೆಂದು ತೋರುತ್ತದೆ. ಐಶೋನ್ಮೇಷ,* ಶ್ರುತಿಪ್ರಕಾಶ, ಆಕಾಶವಾಣಿ ಇಲ್ಲವಾದರೆ ಸಹಜಾವಬೋಧ—* ಇವೇ ಅವರ ಜ್ಞಾನದ ಬುಗ್ಗೆಗಳು. ಎಂದರೆ, ಕೆಲವು ಮತಸ್ಥಾಪಕರಿಗೆ ಧರ್ಮೋಪದೇಶವು ಆಕಾಶದಿಂದ ಆಡಿದಂತೆ ಕೇಳಿಬರುತ್ತದೆ. ಕೆಲವರಿಗೆ ಅಲ್ಲಲ್ಲಿ ಬರೆದು ಬರುತ್ತದೆ. ಕೆಲವರಿಗೆ ಪಶುಪಕ್ಷಿಉರಗಗಳ ಬಾಯಿಯಿಂದ ಬೋಧ ವಾಗುತ್ತದೆ. ಕೆಲವರಿಗೆ ಅದು ಹೃದಯದೊಳಗೇ ಹೊಳೆಯುತ್ತದೆ. ಅಂತೂ ಇಂತೂ **ಸರ್ವಸಾಮಾನ್ಯವಾಗಿರುವ ಬುದ್ಧಿಯ ಹಾದಿಯು ಮಾತ್ರ ಈ ರೀತಿಯ ಉಪದೇಶಗಳಿಗೆ ತ್ಯಾಜ್ಯವಾದ ಹಾದಿಯೆಂದು ತೋರುತ್ತದೆ.** ಹಿಂದೂಮತಗ್ರಂಥಗಳ ಆಕಾಶ ವಾಣಿ ಶ್ರುತಿಪ್ರಕಾಶಗಳೇ ಆಗಲಿ, ಬೈಬಲ್ಲಿನ ಪರಿಶುದ್ಧಾತ್ಮನ ವಚನವೇ ಆಗಲಿ, ಕುರಾನಿನ 'ವಹಿ'ಯೇ ಆಗಲಿ—ಇವುಗಳು ಅಗಮ್ಯಾರ್ಥ, ದುರ್ಗಮ ಎಂದು ಆಯಾ ಮತಾನುಯಾಯಿಗಳು ಹೇಳುವದೊಂದು ಸರ್ವಸಾಧಾರಣವಾದ ವಿಷಯವೇ. ಯಾಕೆ? ಆ ವಿಷಯಗಳನ್ನು ಸಾಕ್ಷಾತ್ ದೇವರೇ ಹೇಳಿದನಂತೆ. ಒಬ್ಬರ ಪ್ರತ್ಯಕ್ಷ ಅನುಭವವು ಹೇಗಿದ್ದರೂ ಅವರು ಆ ಉಪದೇಶಗಳಿಗೆ ಮಾತ್ರ ವಿರುದ್ಧ ಹೇಳಬಾರದು! ಹಾಗೆ ಮಾಡಿದರೆ ದೇಹದಂಡನೆ, ಯಮಪುರಿಯಾತ್ರೆ! ಅದೂ ಆ ದೇವರ ಉಪದೇಶವೇಯಂತೆ! ಸರಿಯೊಂದೇ ಅಲ್ಲದೆ, ಕಲ್ಲು ಎಸೆದು ಕೊಲ್ಲುವದು,* ಮುಳ್ಳು ಚುಚ್ಚಿ ಕೊಲ್ಲುವದು, ಎಣ್ಣೆಬಟ್ಟೆ ಸುತ್ತಿ ಸುಟ್ಟು ಕೊಲ್ಲುವದು ಇವೂ ಆ 'ಪರಮದಯಾಸಿಂಧು,' ದೇವರ ಆಜ್ಞೆಯೇ. ಈ ಧರ್ಮಾತ್ಮರ ಧರ್ಮಬುದ್ಧಿಯಿಂದಾದ ಹಿಂಸೆಗಳನ್ನು ಕುರಿತು ಖಂಡಿಗಟ್ಟಲೆ ಪುಸ್ತಕಗಳನ್ನು ಬರೆಯಬಹುದು.

---

* ದೇವರೇ ಪ್ರಕಟಿಸಿದ್ದು; Revelation

* ತನ್ನೊಳಗೇ ಉದ್ಭವಿಸಿದ ಬೋಧ; Intuition

* ಕೆಲವು ಮುಸಲ್ಮಾನ ಮತದ್ರೋಹಿಗಳನ್ನು ಅಫಗಾನಿಸ್ಥಾನದಲ್ಲಿ ಮೂರು ನಾಲ್ಕು ವರ್ಷಗಳ ಹಿಂದೆ ಕಲ್ಲೆಸೆದು ಕೊಂದದ್ದನ್ನು ಅನೇಕ ವರ್ತಮಾನಪತ್ರಗಳಲ್ಲಿ ಓದಿರಬಹುದು.

ಸತಿಸಹಗಮನ*ವೂ ದೇವರ ಆಜ್ಞೆಯೇ, ಹೆಣ್ಣುಮಕ್ಕಳನ್ನು ಗಂಗಾ ನದಿಯಲ್ಲಿ ಮೊಸಳೆಗಳಿಗೆ ಹಾಕಿಬಿಡುವದೂ ಆತನ ಆಜ್ಞೆಯೇ, ನರ ಬಲಿಯೂ ಆತನ ಆಜ್ಞೆಯೇ, ಯಜ್ಞಗಳಲ್ಲಿ ಮಾಡುವ ಪಶು ಸಂಹಾರವೂ ಆತನ ಆಜ್ಞೆಯೇ, ಸುರಾಪಾನವೂ ಆತನ ಆಜ್ಞೆಯೇ, ಸ್ತ್ರೀಶೂದ್ರರ ನಿರಕ್ಷರತೆಯೂ ದಾರಿದ್ರ್ಯವೂ ಆತನ ಆಜ್ಞೆಯೇ, ಅಸ್ಪೃಶ್ಯತೆಯೂ ಆ ದಯಾಸಾಗರನ ಆಜ್ಞೆಯೇ ಉತ್ಕಟ ಮತಾಭಿಮಾನಿಗಳಿಗೆ. ಆತನಿಗೆ ದಯಾಸಾಗರನೆಂಬ ಬಿರುದು ಎಲ್ಲ ಮತಗಳಲ್ಲಿಯೂ ಇದೆ. ಇಸ್ಲಾಮ್‌ನಲ್ಲಿ ಆತನು ರಹಮಾನ್, ರಹೀಮ್ ಎಂದು ಕರೆಯಲ್ಪಡುತ್ತಾನೆ. ಬೈಬಲ್ಲಿನಲ್ಲಿ ಆತನು 'ದಿ ಲೋರ್ಡ್ ಒಫ್ ಮರ್‌ಸಿ' 'ದಿ ಓಲ್ ಮರಸಿಫುಲ್ ಫಾದರ್'. ಸಾರಾಂಶ ಮಾತ್ರ ಎಲ್ಲ ಒಂದೇ. ಆದರೆ ಆ ದಯಾಳುವಿನ ಮತಗಳಿಗೆ ಬೆಂಬಲವೇನೋ ದಂಡನೆ, ಹಿಂಸೆಗಳಲ್ಲದೆ ಮಾನವನ ಜನ್ಮಸಿದ್ಧಹಕ್ಕೇ ಆಗಿರುವ, ಆ ದೇವರೇ ಕೊಟ್ಟ ಬುದ್ಧಿಯಲ್ಲ. ಮತಗ್ರಂಥಗಳಿಗೆ ವಿರುದ್ಧವಾಗಿ ಆಡಿದ್ದಕ್ಕೆ ಮತಾಭಿಮಾನಿಗಳು ಅಂಥವರಿಗೆ ಕೊಟ್ಟ ಹಿಂಸೆಗಳ, ನಡೆಸಿದ ಯುದ್ಧಗಳ, ಉಂಟುಮಾಡಿದ ಕಷ್ಟನಷ್ಟಗಳ ಚರಿತ್ರೆಯು ಬಹು ಭಯಂಕರವಾಗಿದೆ. **ಭ್ರಮೆಯ ಸಿದ್ಧಾಂತಗಳಿಗೆ ಭೀಕರವಾದ ಬೆಂಬಲ!** ಸ್ವತಂತ್ರ ವಿಚಾರ ಆಚಾರಗಳಿಗೆ ಮತಗಳ ಹಿಂಸೆಯ ದಿಗಿಲಿರೋಣದರಿಂದ ಸರ್ವಸಾಧಾರಣ ಮಾನವನ ಬುದ್ಧಿಯ ವಿಕಾಸವು ಸಾಕಷ್ಟಾಗಲೇ ಇಲ್ಲ. ಉದಾಹರಣೆಗೆ, ನಮ್ಮಲ್ಲಿ ಭೂಮಿಯು ಮಹಾಶೇಷನ ತಲೆಯ ಮೇಲೆ ಭಾರವನ್ನು ಹಾಕಿಕೊಂಡಿದೆಂದು ನಂಬಿಕೆಯಿದೆ. ಅದಕ್ಕೆ 'ಅದು ಸರಿಯೇ; ಆದರೆ ಮಹಾಶೇಷನ ಭಾರವು ಇನ್ನಾರ ತಲೆಯ ಮೇಲಿದೆ?' ಎಂದೂ ಒಂದು ಪ್ರಶ್ನೆಯು ತಾನಾಗಿ ಹೊರಡುತ್ತದಲ್ಲವೆ? ಆದರೆ ಈ ಪ್ರಶ್ನೆಯನ್ನು ಹಾಕಲಿ, ಆತನಿಗೆ ತಕ್ಕ ಪ್ರಾಯಶ್ಚಿತ್ತವು ಸ್ವನಿರ್ಮಿತಸಂಘಹಿತೈಷಿಗಳಾದ ಮತಾಭಿಮಾನಿಗಳ ಕೈಯಿಂದ ಸಿಕ್ಕಿಯೇ ಬಿಡುತ್ತದೆ! ಇನ್ನೊಂದು ವಿಷಯ; ಭೂಮಿಯು ಕದಲದೆ ಇದೆ, ಸೂರ್ಯನು ಅದರ ಸುತ್ತಲೂ

* ಪ್ರೇಮ— ೫ ಸಂಪುಟ, ಸಂಚಿಕೆಗಳು ೯—೧೦ 'ಸಹಗಮನದ ವಿವಿಧ ರೀತಿಗಳು'

ತಿರುಗುತ್ತಾನೆಂಬ ಮತವು ಎಲ್ಲ ಮತಗಳಲ್ಲಿಯೂ ಇದೆ. ಅದಕ್ಕೆ ವಿಪರೀತವಾಗಿ ಭಾವಿಸಿದವರನ್ನು ಕಠಿಣವಾದ ಶಿಕ್ಷೆಗೆ ಗುರಿಮಾಡಿ ಹಿಂಸಿಸಿದ್ದಾರೆ.* ಆದರೆ ಈಗಲೋ ಭೂಮಿಯೂ ತಿರುಗುತ್ತದೆ ಎಂಬ ಸಿದ್ಧಾಂತವು ನಿರ್ವಿವಾದವಾಗಿ ಸ್ಥಿರವಾಗಿ ನಿಂತುಬಿಟ್ಟದೆ. ಈ ಸಿದ್ಧಾಂತವನ್ನು ಮನ್ನಿಸುವವರ ಸಂಖ್ಯೆಯೇ ದಿನೇದಿನೇ ಹೆಚ್ಚಾಗುತ್ತಲಿರೋಣದರಿಂದ ಧರ್ಮಾತ್ಮರು ತಮ್ಮ ಗ್ರಂಥಗಳನ್ನು ಅಷ್ಟರಮಟ್ಟಿಗೆ ಮುಚ್ಚಿಕುಳಿತಿದ್ದಾರೆ. ನಮ್ಮ **ಆರು ಪರಿಚ್ಛೇದಗಳಿಗೆ ಸೇರಿದ ಸಿದ್ಧಾಂತಗಳಲ್ಲಿ ಅನೇಕಾನೇಕವು ಬರಿಯ ಭ್ರಮೆಗಳು, ಕಲ್ಪನೆಗಳು, ಅಂದಾಜುಗಳು ಎಂದು ಈಗಿನ ಪರೀಕ್ಷಕರ ಅನುಭೂತಿಮೂಲ ಪ್ರತ್ಯಕ್ಷಜ್ಞಾನವು ತೋರಿಸಿಬಿಟ್ಟದೆ.** ಇಂಥ ಜ್ಞಾನಕ್ಕೆ ಹಿಂದೆ ಇದ್ದ ಕಾಟವು ಇಂದಿಲ್ಲದಿರೋಣದರಿಂದ ಅದು ಬೆಳಯುತ್ತಲೂ ಇದೆ.

ಸೃಷ್ಟಿಯ ಮೂಲವಾವುದು, ಗತಿಯಾವುದು, ಗಮ್ಯವಾವುದು ಮುಂತಾದ ವಿಷಯಗಳನ್ನೆಲ್ಲ ದೇವರೇ ವಿವಿಧ ರೀತಿಗಳಿಂದ ಜನರಿಗೆ ತೋರಿಸಿಕೊಡುತ್ತಿದ್ದನೆಂಬ ನಂಬಿಕೆಯೇ ಎಲ್ಲ ಮತಗಳಿಗೂ ಆಧಾರವಾಗಿದೆಂದು ಮೇಲೆ ತೋರಿಸಿದೆಯಷ್ಟೆ. ದೇವರು ಒಬ್ಬನೇ ಎಂದೂ ಎಲ್ಲವೂ ನಂಬುತ್ತವೆ. ಹೀಗಿರುವಾಗ **ಆತನು ಈ ಅನೇಕ ವಿಷಯುಗಳನ್ನು ಕುರಿತು ಪ್ರಕಟಿಸಿದ ಜ್ಞಾನವೂ ಒಂದೇ ಆಗಿರಬೇಕಷ್ಟೆ?** ಭಾಷಾವ್ಯತ್ಯಾಸವಿರಬಹುದು; ಹೇಳುವ ರೀತಿಯಲ್ಲಿ ಭೇದವಿರಬಹುದು; ಆದರೆ ಜ್ಞಾನತತ್ತ್ವವೂ ಹಾಗೆ ವ್ಯತ್ಯಾಸವಾಗಿರಲಿಕ್ಕಾದೀತೋ? ಕೊಟ್ಟವನೊಬ್ಬನೇ, ಮೇಲೆ ಆತನು ಸರ್ವಜ್ಞನು; ಹೀಗಿದ್ದುಕೊಂಡೂ ಪರಸ್ಪರ ವಿರುದ್ಧವಾಗಿ ಹೇಳಿಯಾನೋ? ಇಲ್ಲವೆಂದು ಬುದ್ಧಿಯು ಹೇಳುತ್ತದೆ. ಆದರೆ ನಿಜವಾಗಿಯೂ ನೋಡಿದರೆ ಎಷ್ಟೋ ಭೇದಗಳಿವೆ. ಆ ಭೇದಮಯ ಸೂತ್ರಗಳನ್ನೇ ಜ್ಞಾನಮೂಲ ಜೀವನಸೂತ್ರಗಳೆಂದು ಭಾವಿಸಿದ ಜನರು ತಾವು ದೇವರಿಂದ 'ಆರಿಸಲ್ಪಟ್ಟ ಜನಾಂಗ'§ ದವರು

* ಆಕಾಶದೊಳಗಿನ ಅದ್ಭುತ ಚಮತ್ಕಾರಗಳು ಪುಟ. ೧೫–೨೦

§ ಕುರಾನ್ ಮತ್ತು ಬೈಬಲ್ಲಿನಲ್ಲಿ 'ನೊಆ' ಪ್ರವಾದಿಯ ವಿಷಯುದಲ್ಲಿ ಧಾರಾಳವಾದ ಆಧಾರವಿದೆ

ಎಂದು ಹಿಗ್ಗಿ ತಮ್ಮನ್ನು ಇತರರಿಂದ ಪ್ರತ್ಯೇಕಿಸಿಕೊಳ್ಳುತ್ತಾರೆ. ಇಂಥ ನಂಬಿಕೆಯಿಂದ ಹುರಿಗೊಂಡೇ ಮೌಲಾನಾ ಮಹಮ್ಮದ್ ಅಲಿಯವರು ಸಹ ಜಗನ್ಮಾನ್ಯರಾಗಿರುವ ಮಹಾತ್ಮಾ ಗಾಂಧಿಯವರನ್ನು ಕುರಿತು:- ಸ್ವಮತದೃಷ್ಟಿಯಿಂದ ನೋಡಲಾಗಿ ಗಾಂಧಿಜಿಯವರಿಗಿಂತ ಒಬ್ಬ ಚಿಲ್ಲರೆ ಮುಸಲ್ಮಾನ ಪಾತಕಿಯು ಹೆಚ್ಚಿನವನೆನ್ನಬೇಕಾಗುತ್ತದೆ- ಎಂದರು! ಮತ್ತೆ ನೋಡಿದರೆ ಇದನ್ನು ಹೇಳಿದಾಗ ಅವರಿಗೆ ಗಾಂಧೀಜಿಯವರಲ್ಲಿ ಸಂಪೂರ್ಣ ಗೌರವವಿತ್ತು. ಆದರೆ ಮತದ ಕಟ್ಟು ಹಾಗಿದೆ! ಅದರ ಉಪದೇಶದ ಮುಸುಕು ಹಾಗಿದೆ! ಮತಾಭಿಮಾನವು ಎಂಥ ಬೆಳಕಿಗೂ ಕಣ್ಣನ್ನೇ ಮುಚ್ಚಿಬಿಡುತ್ತದೆ! ತಾವು ದೇವರು ಮೆಚ್ಚಿದ ದೇವರಿಂದ 'ಆರಿಸಲ್ಪಟ್ಟ ಜನಾಂಗ'ವಾಗಿರೋಣದರಿಂದ ಆ ಭೇದಗಳು ಆತನು ಅಸಾಮಾನ್ಯವಾಗಿ ಹೆಚ್ಚಿನ ಪ್ರೀತಿಯಿಂದ ತಮಗೇ ಕೊಟ್ಟ ವಿಶೇಷ ಜ್ಞಾನವೆಂದು ಭಾವಿಸಿಕೊಳ್ಳುತ್ತಾರೆ! ಅವುಗಳಿಗಾಗಿ ತಾವು ಉಚ್ಚರು ಇತರರು ನೀಚರು ಎಂದು ಭಾವಿಸಿಕೊಳ್ಳುತ್ತಾರೆ. ಮುಂದೆ **ಆ ಭಾವನೆಗೆ ತಕ್ಕ ಗುಣ ವರ್ತನಗಳೂ ಅನುಯಾಯಿಗಳಲ್ಲಿ ಉಂಟಾಗುತ್ತವೆ.** ಅಂದಮೇಲೆ ಇವುಗಳಿಗೆ ಮರುಳಾದ ಹೃದಯಕ್ಕೆ ಲೋಕಸಂಗ್ರಹವು ಸಾಧ್ಯವೋ? ಇವುಗಳ ವಾತಾವರಣದಲ್ಲಿ ಒಕ್ಕಟ್ಟು ಕಾಣಬಂದೀತೋ? ಪರಸ್ಪರ ಪ್ರೇಮಾನುರಾಗಸೇವೆಗಳಿಗೆ ಅವಕಾಶವಿದ್ದೀತೋ? ಮೇಲೆ ಮೇಲಿನ ಬರಿಯ ಮಾತಿನ ಕಂಥಾಕರಣದಿಂದೇನುಪಯೋಗ? ಆದರಿಂದ ಮನಸಾರೆ ಒಕ್ಕಟ್ಟು ಆಗದು. ಒಪ್ಪಂದವು ಒಂದುವೇಳೆ ಸಾಧ್ಯವಾದೀತು. ಆದರೆ ಅದು ಬಹುಕಾಲ ನಡೆಯಲಾರದು. ಹಾಗಾಗುವದಕ್ಕೆ ನಿಸರ್ಗವೇ ಆನನುಕೂಲ. ಅನೈಸರ್ಗಿಕ ಜೀವನದಲ್ಲಿ ಬಹುದುಷ್ಟ ಪರಿಣಾಮಗಳು ಅಡಕವಾಗಿವೆ. **ಐಕ್ಯಕ್ಕೆ ಬೇಕಾದದ್ದು ಜ್ಞಾನಯುಕ್ತ ಬುಧಜನಸಮ್ಮತ ವಿವೇಕವೇ.** ಅಂತಹದಕ್ಕೆ ಬುದ್ಧಿಯ ಸಹಾಯವೇ ಪ್ರಧಾನವಾಗಿರಬೇಕು, ಅಲ್ಲದೆ ಭ್ರಮಕಲ್ಪನೆಗಳಿಂದುಂಟಾದ, ಭೇದಗಳನ್ನುಂಟುಮಾಡುವ, ಕುರುಡುನಂಬಿಕೆಯನ್ನೇ ಅವಲಂಬಿಸಿಕೊಂಡಿರುವ ಗ್ರಂಥೋಕ್ತಿಗಳಲ್ಲ. ಅಂಥ ಶ್ರದ್ಧೆಯು ಭ್ರಮೆಗೆ ಗೊಬ್ಬರ,

ಪೃಥಗ್ಭಾವ

ಜ್ಞಾನಪ್ರಗತಿಗಳ ವೈರಿ, ಜಗಳಗಳಿಗೆ ಮೂಲ. ಮಾನವನ ಮಾನ ವ್ಯವು ಬೆಳೆಯಬೇಕಾದರೆ ಬುದ್ಧಿಯು ಶುದ್ಧವಾಗಿ ಬೆಳೆಯಬೇಕು. ಅದಕ್ಕೆ ಅಂಧಶ್ರದ್ಧೆಯ ಮೋಡವು ಕವಿದಿರುವವರೆಗೆ ಮನುಷ್ಯನಿಗೆ ಅದು ಸಾಧ್ಯವಿಲ್ಲ. ಪ್ರಕೃತಿಯು ಒಂದಾಗಿರಿಸಿರುವದನ್ನು ಕಪೋಲಕ ಲ್ಪಿತವು. ನೂರೊಂದನ್ನಾಗಿ ಭಿನ್ನಗೊಳಿಸುವದೂ ಒಂದು ಮಾನವನ ದುರ್ದೈವವೇ ಅಲ್ಲವೆ? ಅಯ್ಯೋ! ಐಕ್ಯವನ್ನುಂಟುಮಾಡುವದನ್ನು ಬಿಟ್ಟು ಭೇದಗಳನ್ನುಂಟುಮಾಡುವದೂ ಒಂದು ಧರ್ಮವೋ? ಮಾತು ಮಾತಿಗೂ ಬುದ್ಧಿಯನ್ನೇ ಬದಿಗೊತ್ತಿ ಮಲ್ಲಾಮಲ್ಲಿಯನ್ನೇ ಹುರಿಗೊ ಳಿಸುವದಾದರೂ ಒಂದು ಮತವೋ? ನಿರ್ಮಲ ಮತ್ತು ನಿಃಸ್ವಾರ್ಥ, ನಿರಭಿಮಾನಿಯಾದ ಬುದ್ಧಿಯು ಇದನ್ನು ವಿಚಾರಿಸಲಿ.

---

## ೨ನೆಯ ಪ್ರಕರಣ
## ಮತವೋ ಸತ್ಯವೋ



ಇಂಥ ಗೊಂದಲವು ಉಂಟಾಗಲಿಕ್ಕೆ ಕಾರಣವೇನು? ದೇವ, ಧರ್ಮ, ಸ್ವರ್ಗ, ನರಕ, ನ್ಯಾಯ, ನೀತಿ ಮುಂತಾದ ವೃತ್ತಿಗಳು ಮನುಷ್ಯನ ಚಿತ್ತದಲ್ಲಿ ಉದ್ಭವಿಸಲಿಕ್ಕೆ ನಿಮಿತ್ತವಾವುದು? ತನ್ನ ಸ್ವಾರ್ಥಕ್ಕಾಗಿ ಮನುಷ್ಯನು ಇವನ್ನು ಕಲ್ಪಿಸಿದನೋ ಅಥವಾ ತನ್ನ ಪ್ರಕೃತಿಯೇ ತನ್ನ ವಿಪರ್ಯಯವೇ§ ಇವನ್ನು ಅವನಲ್ಲಿ ಉದಯಿಸಿತೋ? ಆತ ನನ್ನು ಹುಟ್ಟಿಸಿದ್ದು ಸ್ವಸುಖಕ್ಕಾಗಿಯೋ ಪರಹಿತಕ್ಕಾಗಿಯೋ ಸ್ವಪರ ಹಿತಕ್ಕಾಗಿಯೋ? ಇತರರನ್ನು ವಂಚಿಸುವದಕ್ಕಾಗಿ ಮಾತ್ರ ಹಲಕೆ ಲವು ಚುರುಕುಬುದ್ಧಿಯವರು ಮೊದಲಿನಿಂದಲೇ ಮತಗಳನ್ನು ಮಾಡಿ

§ ಶಿಕ್ಷಣದ ಸಹಾಯವಿಲ್ಲದ ಬುದ್ಧಿಯಲ್ಲಿ ಉಂಟಾಗುವ ತಪ್ಪುತಿಳುವಳಿಕೆ.

4

ಟ್ಟರೆಂದು ಭಾವಿಸುವದು ನ್ಯಾಯವಲ್ಲ. ಬರಿಯ ಒಬ್ಬಿಬ್ಬರ ಮೋಸವೇ ಮತಗಳ ಉದ್ದೇಶವಾಗಿದ್ದರೆ ಅಷ್ಟು ಕಾಲ ಅಷ್ಟು ಜನರು ಮೋಸ ಹೋಗುತ್ತಿದ್ದಿಲ್ಲ. ಆದರೆ ಹಾಗೆ ಜನಸಮುದಾಯವನ್ನು ಯಾರೂ ಮೋಸಗೊಳಿಸಿಲ್ಲವೆಂದು ಹೇಳಲಿಕ್ಕೂ ಆಗದು. ಅಂಥ

ಮತಗಳ ಹುಟ್ಟು

ವರು ಹಲಕೆಲವರಿದ್ದರೆ ಮತಸ್ಥಾಪಕರ ಸರಳತೆಯನ್ನೇ ಸನ್ಮಾನಿಸಿ ಅವರು ಬರೆದಿಟ್ಟ ಸೂತ್ರಗಳನ್ನು ಹಿಡಿದೇ ನಡೆಯುವವರು ಬಹಳ ಮಂದಿ ಇದ್ದಾರೆ. ಆದರೆ **ಸರಳತೆಯು ಮೋಸವಲ್ಲವಾದರೂ ಸಂಪೂರ್ಣ ಸತ್ಯಜ್ಞಾನವು ಅಲ್ಲ.** ವ್ಯಕ್ತಿ ವ್ಯಕ್ತಿಗಳಲ್ಲಿ ಮೇಲೆ ನೋಡಲಿಕ್ಕೆ ನಮಗೆ ವ್ಯತ್ಯಾಸ ಕಂಡುಬಂದರೂ ಒಂದೊಂದು ಕಾಲದ ಜನಸಮುದಾಯದ ಮೂಲ ಸಂಸ್ಕಾರಗಳಲ್ಲಿ ಅಷ್ಟೊಂದು ಭಿನ್ನತೆಯು ಇರುವದಿಲ್ಲ. **ಮನಸ್ಸಿನ ಪ್ರೇರಣೆಗಳು, ಅದರ ಕಾಂಕ್ಷೆಗಳು ಅದರ ಗತಿಗಮ್ಯಗಳು ಬುಡದಲ್ಲಿ ಒಂದೇ ಆಗಿರುತ್ತವೆ. ಇವೇ ಮತಗಳ ಜನ್ಮಭೂಮಿ.** ಹೆಚ್ಚಿನ ಬುದ್ಧಿಯವನು ತನ್ನ ವಿಚಾರಗಳನ್ನು ಆಚರಿಸಿ ಪ್ರಕಟಿಸಿ ಪ್ರಚುರಗೊಳಿಸುತ್ತ ಸಹಜವಾಗಿ **ಮತಾಚಾರ್ಯ**ನಾಗುತ್ತಾನೆ. ಇತರರ ಆಕಾಂಕ್ಷೆ, ದಿದೃಕ್ಷೆ, ಜಿಜ್ಞಾಸೆಗಳಿಗೆ ಆ ದೊಡ್ಡ ವ್ಯಕ್ತಿಯ ವಿಚಾರ ಆಚಾರಗಮ್ಯಗಳು ಸಮ್ಮತವಾಗಿ ಬಿಟ್ಟು ಸಮಾಧಾನವನ್ನುಂಟುಮಾಡುವದರಿಂದ ಇವರು ಅವನನ್ನು ಶ್ರದ್ಧೆಯಿಂದ ಅನುಸರಿಸುತ್ತಾರೆ. ಅವನು ಮತಸ್ಥಾಪಕನಾಗುತ್ತಾನೆ; ಇವರು ಮತಾನುಯಾಯಿಗಳಾಗುತ್ತಾರೆ. ಇಲ್ಲಿ ಎಲ್ಲಿಯಾದರೂ ಬೇಕುಬೇಕೆಂದು ಮಾಡಿದ ಮೋಸವಿದೆಯೋ? ಹೃದಯದಲ್ಲಿಯಾದರೂ ಕಲ್ಮಷವಿದೆಯೋ? ಉಪಾಯ ಉಪದೇಶಗಳು ಅಯುಕ್ತವಾಗಿರಬಹುದು, ಅದಕ್ಕೆ ದುರುದ್ದೇಶವನ್ನು ಮಾತ್ರ ಆರೋಪಿಸಲಿಕ್ಕಾಗದು.

ಈಗ ಭೌತಿಕಶಾಸ್ತ್ರ ಆರ್ಥಿಕಶಾಸ್ತ್ರ ಮುಂತಾದ ನಾನಾ ವಿಧವಾದ ಶಾಸ್ತ್ರಗಳು ಕೇವಲ ಶೋಧ ಪರೀಕ್ಷಣಗಳನ್ನೇ ಆಧಾರವಾಗಿಟ್ಟುಕೊಂಡು ಬೆಳೆಯುತ್ತವೆ. ಈ ಹಬ್ಬುವಿಕೆಯು ಹಿಂದಿನ ಗುರುಶಿಷ್ಯರ ಸಂಪ್ರದಾಯದ ಉಪದೇಶದಂತಿಲ್ಲ. ಜಾತಿಕುಲಲಿಂಗಭೇದಗಳನ್ನನುಸರಿಸಿಕೊಂಡು ಬಂದ 'ಅಧಿಕಾರ' ಭೇದಗಳಿದರಲ್ಲಿಲ್ಲ. ತಿಳಿದುಕೊಳ್ಳುವ

ಅರ್ಹತೆಯೇ ಈ ಕಾಲದ ಅಧಿಕಾರಲಕ್ಷಣ. ಹೀಗಿರೋಣದರಿಂದ ಜನಸಾಮಾನ್ಯದ ಸಾಧಾರಣ ಪ್ರಾಯಿಕ * ಜ್ಞಾನವು ಹೆಚ್ಚಿದೆ. **ವಿಜ್ಞತೆ§ಯು ಇಲ್ಲವಾದರೂ ಅಜ್ಞತೆಯು ಎಷ್ಟೋ ಕಡಿಮೆಯಾ** ಅಧಿಕಾರವ್ಯತ್ಯಾಸ **ಗಿದೆ.** ಇದರಿಂದ ಜನಸಾಮಾನ್ಯದ ಆತ್ಮಾಭಿಮಾನವೂ ಹೆಚ್ಚುತ್ತ ಬಂದಿದೆ. ಈ ಎಚ್ಚರಿಕೆಯಿಂದ, ಮಾನವನನ್ನು ಮುಂದಕ್ಕೆ ತರುವ ಹಾದಿಗೆ ಮುಳ್ಳು ಹಾಕುವ ಪ್ರತಿಯೊಂದು ಶಾಸ್ತ್ರ ಸೂತ್ರ– ರೀತಿ– ನೀತಿಯೂ, ಆತನಿಗೆ ವೈರಿಯಾಗಿಯೇ ತೋರುತ್ತಲಿದೆ. ಆತ್ಮಗೌರವವು ನೈಚ್ಯಾನುಸಂಧಾನ‡ಕ್ಕೆ ಬಗ್ಗದೆ ಅದನ್ನುಂಟು ಮಾಡುವಂಥ ಎಲ್ಲ ವಿಷಯಗಳಿಗೂ ಇದಿರಾಗಿ ನಿಂತು ದಂಗೆಯನ್ನೇ ಎಬ್ಬಿಸಿದೆ. ಇದು ಸಹಜವೇ. ಆದರೆ ಈ ಎಚ್ಚರಿಕೆಯು ಕೋಪದಿಂದ ಲಾಭವನ್ನು ಹೊಂದಲಿಕ್ಕಿಲ್ಲವೆಂಬದಾಗಿಯೂ ಎಚ್ಚರಿಕೆಯು ಸಾಕಷ್ಟಿರಬೇಕು. ಸ್ವಾರ್ಥ ಮತ್ತು ಹೊಟ್ಟೆಕಿಚ್ಚಿನಿಂದ ಬೇಕುಬೇಕೆಂದು ಉಂಟು ಮಾಡಿದ ಭೇದಗಳಿಗಾಗಿ ಸಿಟ್ಟು ಬರುವದು ಸಹಜ. ಆದರೆ ಹೃದಯವು ನಿಷ್ಕಪಟವಾಗಿರುವಾಗ ಅಂಥವರನ್ನು ನಿಂದಿಸುವದು ಅನ್ಯಾಯುವಲ್ಲವೇ? ಅಂತಹ ಮನಸ್ಸಿನಿಂದ ಇಂದು ಮತ್ತೆ ಹೊಸ§

---

* ಜ್ಞಾನವು ಎರಡು ವಿಧವಾದದ್ದು. ವೈದಿಕ ಮತ್ತು ಪ್ರಾಯಿಕ. ಒಂದಕ್ಕೆ ಆತ್ಮವು ವಿಷಯು, ಇನ್ನೊಂದಕ್ಕೆ ಸ್ಥೂಲ ಜಗತ್ತು. ಒಂದು ಪುರಾತನ ವುತ್ತು ವಿಶೇಷ ಇನ್ನೊಂದು ಇಂದಿನವರೆಗೆ ಸಾಮಾನ್ಯರಿಗೆ ತಿಳಿಯುವಂತೆ ವಿಶಾಲವಾಗಿ ಕೂಡಿಕೊಂಡು ಬಂದಿರುವ ವಿವಿಧ ಜ್ಞಾನ (General and up-to-date) ಎಂದರ್ಥವಾಗುತ್ತದೆ. ವೈದಿಕ ಪ್ರಾಯಿಕ ಎರಡು ಭಾಗಗಳನ್ನೂ ಚನ್ನಾಗಿ ಅರಿತವನೇ ಪ್ರಬೋಧಕನಾಗಲಿಕ್ಕೆ ಯೋಗ್ಯನು ಎಂದು ಜ್ಞಾನಿಗಳ ಮತ.

§ ವಿಶೇಷ ಜ್ಞಾನ Expertness

‡ ತಾನು ಕೈಲಾಗದವನು ಎಂದೇ ಸದಾ ಭಾವಿಸುವದು; Inferiority Complex ಇದಕ್ಕೆ ಅವರತ್ವ ಎಂದೂ ಒಂದು ಹೆಸರಿದೆ. ಇದನ್ನು ಜಯಿಸುವಂಥ ಶ್ರೇಷ್ಠ ಜ್ಞಾನಧ್ಯಾನಯುಕ್ತ ಕಲ್ಪನಾಸೃಷ್ಟಿಯಿದೆ. ಅಲ್ಲಿ ಹೆಚ್ಚಿನ ಆನಂದ ಸ್ವಾತಂತ್ರ್ಯಗಳು. ತನ್ನ ಅಮರತ್ವದ ಎಚ್ಚರಿಕೆಯಾಗುತ್ತದಲ್ಲಿ.

§ ರಾಷ್ಟ್ರಜೀವನವನ್ನು ಹಾಳುಮಾಡುತ್ತಿರುವ ಬ್ರಾಹ್ಮಣ–ಬ್ರಾಹ್ಮಣೇತರರ ಜಗಳ ಇದಕ್ಕೆ ಒಂದು ದೃಷ್ಟಾಂತ.

ಜಗಳಗಳುಂಟಾಗುವವು. ಕ್ರಿಯೆಗಾಗಿ ಕರ್ತೃವನ್ನು ದೋಷಿ ಎನ್ನಬೇಕಾದರೆ ಆತನ ಹೃದಯದಲ್ಲಿ, ಆತನ ಸಂಕಲ್ಪದಲ್ಲಿ ಕಲಂಕವಿತ್ತು, ದುರುದ್ದಿಶ್ಯವಿತ್ತೆಂಬದನ್ನು ಕಂಡು ಸಾಧಿಸುವ ಶಕ್ತಿಯನ್ನಿಟ್ಟುಕೊಂಡಿರಬೇಕು. ಅಂಥ ದೋಷವನ್ನು ಸಾಧಿಸುವದಕ್ಕೆ ಸಾಕಷ್ಟು ಆಧಾರ ನಮ್ಮಲ್ಲಿಲ್ಲವಾದರೆ ನಮಗೆ ಕರ್ತೃವನ್ನೇ ದೂಷಿಸುವ ಅಧಿಕಾರವಿಲ್ಲ. ಆತನ ಬುದ್ಧಿಯಲ್ಲಿ ಲೋಪನ್ಯೂನತೆಗಳು ಇದ್ದವೆಂದು, ಬೇಕಾದರೆ ಸಾಧಿಸಬಹುದು. ಆದರೆ ಈ ಹಾದಿಯನ್ನು ತುಳಿಯುವಾಗ ಯಾವ ರೀತಿಯಿಂದಲೂ ಕರ್ತೃವಿಗೆ ದುರುದ್ದಿಶ್ಯವನ್ನು ಅಂಟಿಸಿದ ದೋಷವು ತಟ್ಟದಂತೆ ಜಾಗರೂಕರಾಗಿರಬೇಕು. **ಈ ಸಂದರ್ಭದಲ್ಲಿ ಮತಸ್ಥಾಪಕರು ಎಷ್ಟು ದೊಡ್ಡವರಾಗಿದ್ದರೂ, ಕಾಲಮಹಿಮೆಗೆ ಮತ್ತು ಜನಸಾಮಾನ್ಯದ ಮನಸ್ಸಿನ ಸ್ಥಿತಿಗಮ್ಯಗಳಿಗೆ ಎಷ್ಟರಮಟ್ಟಿಗೆ ಅವರೂ ಅಧೀನರಾಗಿದ್ದರೆಂಬದನ್ನು ಸಹ ನೋಡಿಕೊಳ್ಳುವದುತ್ತಮ.**

ನಿಂದೆಯು ಅಯುಕ್ತವೇ.

ಸಂಸ್ಕರಣವು ಅಲ್ಲವೆ ನಮಗೆ ಬೇಕಾದುದು? ಅದು ಅವರನ್ನು ನಿಂದಿಸುವದರಿಂದ ಆಗುವದೋ? ಅಥವಾ ಅಂದಿನ ತಪ್ಪು ತಿಳಿದುಬಂದ ಮೇಲೆ, ಆ ತಪ್ಪಿಗೆ ಜನ್ಮವನ್ನು ಕೊಟ್ಟ ಭೂಮಿಯನ್ನು ಕಂಡುಹಿಡಿದು ಅದನ್ನು ಇಂದು ನಾವು ತ್ಯಜಿಸುವ ಉಪಾಯವನ್ನು ಮಾಡುವದು ಮೇಲೋ? ನಮ್ಮಲ್ಲಿಯ ಭೇದಗಳಿಗೆ ಕಾರಣಗಳೇನು, ಅವುಗಳಲ್ಲಿ ಸಂಕಲ್ಪದಿಂದ ಹುಟ್ಟಿದವುಗಳು ಯಾವವು, ತಿಳವಳಿಕೆಯಿಲ್ಲದೆ ಉಂಟಾದವುಗಳು ಯಾವವು, ಅವೆಲ್ಲದರಲ್ಲಿಯೂ ಕಾಲ ಮತ್ತು ಜನತೆಯ ಪ್ರಕೃತಿಯು ಮತ್ತು ಮನಸ್ಸಿನ ಆಕಾಂಕ್ಷೆ ದಿದೃಕ್ಷೆ ಅವಶ್ಯಕತೆಗಳು, ಎಷ್ಟರಮಟ್ಟಿಗೆ ಅರಿತಾಗಲಿ ಅರಿಯದೆಯಾಗಲಿ ಸೇರಿಕೊಂಡು ಬಂದಿವೆವೆಂಬದನ್ನು ಪರೀಕ್ಷಿಸಿ ನೋಡಿದರಲ್ಲವೆ ಸಂಸ್ಕರಣಕ್ಕೆ ಬೇಕಾದ ಸಾಮುಗ್ರಿಗಳು ನಮಗೆ ಈಗ ದೊರೆಯುವವು? ಕತ್ತಲೆಯಲ್ಲಿ ಕತ್ತಲೆ ಕತ್ತಲೆ ಎಂದು ಬೊಬ್ಬೆ ಇಡುವದರಿಂದ ಆ ಕತ್ತಲೆಯು ಹೋದೀತೋ? ಅದನ್ನು ಪುಟ್ಟಿಯಲ್ಲಿ ತುಂಬಿ ಬಿಸುಟಲಾಗುವದೋ? ಕತ್ತಲೆಯೆಂಬದೊಂದು ವಸ್ತುವಾಗಿದ್ದರಲ್ಲವೆ ಹಾಗೆ ಮಾಡುವದು ಸಾಧ್ಯ? ಅದನ್ನು

ಯೋಗ್ಯ ಸಂಸ್ಕರಣಕ್ಕೆ ಶುದ್ಧ ಸಂಸ್ಕಾರಗಳು

ಬೇಕು.

ಇಲ್ಲದಂತೆ ಮಾಡಬೇಕಾದರೆ ಒಂದು ಬೆಂಕಿಕಡ್ಡಿಯನ್ನು ಗೀಚುವದು ಮೇಲು ಅಲ್ಲವೆ? **ಕತ್ತಲೆಗೂ ಅದರ ಭೀಕರ ಪರಿಣಾಮಗಳ ವಿನಾಶಕ್ಕೂ ಪ್ರಕಾಶವೇ ಬೇಕಾದ ವಸ್ತು.** ಹಾಗೆಯೇ ಅಜ್ಞಾನವನ್ನೂ ಅದರ ದುಷ್ಪರಿಣಾಮಗಳನ್ನೂ ನಿರ್ಮೂಲಗೊಳಿಸುವದಕ್ಕೆ ಅದು ಮನೆಮಾಡಿ ಕೂಂಡಿರುವ ಜಾಗೆಗೆ ಅಂದರೆ ಬುದ್ಧಿಗೆ ಪ್ರಕಾಶವನ್ನು ತರಬೇಕು. ಸಂಸ್ಕರಣಕ್ಕೆ ನಿಂದೆಯು ಉಪಯೋಗದ್ದಲ್ಲ; ಸಂಸ್ಕಾರಗಳು ಬೇಕು; ನವಜ್ಯೋತಿಯುಕ್ತ ಸಂಸ್ಕಾರಗಳು ಬೇಕು. ಅವನ್ನು ಶೋಧ–ವಿಚಾರ ಪರೀಕ್ಷಣಗಳ ರಾಜ್ಯದಲ್ಲಿ ಮಾತ್ರವೇ ಕಾಣಬಹುದು. ಅಲ್ಲಿ ಹೋದರೆ ನಮಗೆ ಪ್ರಕೃತಿಯ ಗಾಂಭೀರ್ಯವು ಪ್ರಕಟವಾಗುವದು; ಜೀವಿಯ ಪರಾಧೀನತೆಯು ತೋರುವದು; ಜೀವಿಯ ಮೇಲಿರುವ ಅದರ ಅಜೇಯ್ಯ ಪ್ರಭಾವವು ತಿಳಿಯುವದು; ಹೃದಯದಲ್ಲಿಯ ನಿಂದಾಸ್ತುತಿ ಹೇತುಕವಾದ ಮಲವು ತೊಳೆಯಲ್ಪಡುವದು. ಸಾಮಾನ್ಯ ವ್ಯಕ್ತಿಯು ಚಿತ್ತವೃತ್ತಿಯ ರೂಪ ಮತ್ತು ಯಂತ್ರವೆಂದು ತಿಳಿದುಬಂದು ಚಿತ್ತವು ಉದಾರವಾಗುವದು; ಸಹನಸಹಿಷ್ಣುತೆಗಳು ಬೆಳೆಯುವವು; ವೃತ್ತಿಯು ಪರಿಸ್ಥಿತಿಯ ಪರಿಣಾಮವೆಂಬದು ಗೊತ್ತಾಗಿ, ವೃತ್ತಿಯನ್ನು ಅನುಕೂಲವಾಗಿಟ್ಟುಕೊಳ್ಳುವದಕ್ಕಾಗಿ ಪರಿಸ್ಥಿತಿಯನ್ನೇ ಸಾಧ್ಯವಾಗುವಷ್ಟು ಮಟ್ಟಿಗೆ ಮಾರ್ಪಡಿಸುವ ಕಡೆಗೆ ಮನಸ್ಸು ಹೋಗುವದು. * ಇದರಿಂದ ಒಂದು ವಿಧವಾದ ಆನಂದವಾಗುವದು.

ಮೂಲವನ್ನೇ ಕಾಣ ಯತ್ನಿಸುವದರ ಫಲ

ಅಷ್ಟೇ ಅಲ್ಲ ಜ್ಞಾನವು ಹೆಚ್ಚಾಗುವದು. ಸಾರಾಂಶ–**ಜೀವಿತದಲ್ಲಿ ಉಲ್ಲಾಸವೂ ವಿಕಾಸವೂ ಉಂಟಾಗುವವು.** ಜೀವಿತದ ಸಹಜ ಗುಣಗಮ್ಯಗಳಾದರೂ ಅಷ್ಟೇ ಅಲ್ಲವೆ? ಶತಮಾನಗಳಿಂದ ಬಂದ ಮತಗಳ ನಿಜವಾದ ಹುಟ್ಟು ಹುಡುಕಿ ಯಥಾಶಕ್ತಿ ಯಥಾರ್ಥಜ್ಞಾನದಿಂದ ಸಂಸ್ಕರಣ ರಂಗಕ್ಕಿಳಿಯುವದುತ್ತಮವಾದ ಮಾನವ ಧರ್ಮವೇ ಅಲ್ಲವೆ?

---

* ಮುಂದೆ ,,ನವಸೃಷ್ಟಿ" ಯನ್ನು ನೋಡುವದು.

ನಮ್ಮ ಸಾಂಖ್ಯಯೋಗ ವೇದಾಂತಗಳಲ್ಲಿ ತುಂಬಿರುವ ವಿಭಜ್ಯ ದರ್ಶನ,§ ಆನ್ವೀಕ್ಷಕಿ* ಜ್ಞಾನ ಮತ್ತು ವಿವಿಧಜ್ಞಾನ ಸಮನ್ವಯ‡ ಗಳಿಗೆ ಇಂಥ ವಿವೇಕಯುಕ್ತ ಬಹುಧಾನಕ* ಮೆದುಳೇ ಮೂಲ. ಇದಕ್ಕೆ ಪೂರ್ವದಲ್ಲಿ ಅನೇಕ ಉಪನಿಷತ್ತುಗಳೂ ದರ್ಶನಗಳೂ ಇವು ಗಳ ತರುವಾಯ ಭಗವದ್ಗೀತೆಯೂ ಇವುಗಳಂತೆಯೇ ವಿವೇಕದ ಹಾದಿಯನ್ನು ತುಳಿದಿವೆ. ಅಂಧ ಶ್ರದ್ಧೆಯನ್ನು ಬಹಳವಾಗಿ ದೂರ ದಲ್ಲಿಟ್ಟವೆ. ಅವೆಲ್ಲಕ್ಕೂ ಪ್ರಿಯವಾದ ರೀತಿ ಎಂದರೆ ಅಲಿಪ್ತ ವಿಚಾರ, ಸ್ಫುಟವಾದ ವಿವೇಚನೆಗಳೇ. ಈ ರೀತಿಯಿಂದ, (ಮತಗ್ರಂಥಗಳಿಗೆ ಮೊದಲಿನಿಂದ ಕೊನೆಯವರೆಗೆ ಮರುಳಾಗಿ ಅವುಗಳ ಪದಪದವನ್ನೂ ಆಧಾರವಾಗಿಟ್ಟುಕೊಳ್ಳದೆ) **ವಿಮರ್ಶೆಯಿಂದ ತಮ್ಮ ತಮ್ಮ ಮತ ವನ್ನೇ ಪುಟಕ್ಕಿಟ್ಟು ತಮ್ಮ ಪ್ರಗಲ್ಭ ವಿಜ್ಞಾನ ವಿವೇಕಗಳಿಂದ ಮಹಾನುಭಾವರು ಉದ್ಧರಿಸುತ್ತ ಬಂದದ್ದನ್ನು ಎಲ್ಲ ಮತಚರಿ ತ್ರೆಗಳಲ್ಲಿಯೂ ಕಾಣಬಹುದು.** ಸ್ವತಂತ್ರ ವಿಚಾರವು ವೇದ ಕಾಲದಲ್ಲಿಯೂ ಇತ್ತೆಂದೇ ಅವಕ್ಕೆ ಉಪನಿಷತ್ತುಗಳ ಕೊಂಬೆ ಒಡೆಯಿತು. ವೇದಗಳ ಮಂತ್ರ ಬ್ರಾಹ್ಮಣಗಳನ್ನೇ ಅವು ತಮ್ಮ ನಿದಾರ್ಕ್ಷಿಣ್ಯ, ನಿರ್ಭೀತ ನಿಷ್ಪಕ್ಷಪಾತ ಬುದ್ಧಿಯ ಬೆಂಕಿಯಲ್ಲಿ ಪುಟ ಕ್ಕಿಟ್ಟು ಅವುಗಳೊಳಗಣ ಶುದ್ಧ ಸುವರ್ಣವನ್ನು ಮಾತ್ರ ವಿಮರ್ಶಕ ಜಗತ್ತೇ ಬೆರಗಾಗುವಂತೆ ಎತ್ತಿಟ್ಟವು. ಹಾಗೆಯೇ ಗೀತೆಯಲ್ಲಿಯೂ ಅಂತಹ ಪುಟಕ್ಕೆ ಕೊಟ್ಟ ಗೌರವವನ್ನು ಎಷ್ಟೋ ಕಡೆ ನೋಡಬ ಹುದು, 'ಹೀಗೆ ಸಾಂಖ್ಯಕ್ಕೆ ಸರಿಯಾಗಿ ನಿನಗೆ ಜ್ಞಾನವನ್ನು ಹೇಳಿ

§ ವಿಷಯವನ್ನು ಬಿಡಿಸಿ ಅದರ ತುದಿ ಮೊದಲು, ಕಾರಣ ಪರಿಣಾಮ ಸ್ಥಿತಿ ಗತಿಗವ್ಯಗಳನ್ನು ನೋಡುವದು.

* ಮನಃಶಾಸ್ತ್ರ. ಚಿತ್ತದಲ್ಲಿ ವೃತ್ತಿಗಳು ಹೇಗೆ ಹುಟ್ಟುತ್ತವೆ? ಅವುಗಳಿಗೆ ಉತ್ತೇಜ ಕಗಳಾವವು? ಆ ಉತ್ತೇಜಕಗಳಿಗೆ ಈ ವೃತ್ತಿಗಳು ಹೇಗೆ ನಡೆಯುತ್ತವೆ, ಅಂದರೆ ಯಾವ ಉತ್ತರಗಳನ್ನು ಕೊಡುತ್ತವೆ? ಉತ್ತರ ಅಥವಾ ನಡೆಯಲ್ಲಿ ಹೇಗೆ ಹೆಜ್ಜೆಗಳು ಬೀಳು ತ್ತವೆ ಉತ್ತೇಜನೋತ್ತರಗಳ ವಿವರದ ಪ್ರಕರಣದಲ್ಲೋದಿ.

‡ ವೇದಾಂತದ ಅನುಭವದಲ್ಲಿ ವಿವಿಧ ಜ್ಞಾನಗಳ ಸಮನ್ವಯವಿದೆಯೆಂದು ಜ್ಞಾನಿಗಳ ಮತ.

* ವಿಧವಿಧವಾದ ಅನುಭವಗಳನ್ನೂ ಸಮನ್ವಯಿಸಿಕೊಂಡ

ದೆನು'‡ ಎಂದು ಅರ್ಜುನನಿಗೆ ಕೃಷ್ಣನು ಹೇಳುತ್ತಾನೆ. ಆ ಸಾಂಖ್ಯವಾದರೂ ವೇದವನ್ನು ಕುರಿತು ಏನೆನ್ನುತ್ತದೆ ಎಂದು ನೋಡುವ, 'ದೃಷ್ಟವದಾನುಶ್ರವಿಕಃ ಅವಿಶುದ್ಧಿಃಕ್ಷಯಾತಿ ಶಯಯುಕ್ತಃ'§ ಎಂದು ಸಾಂಖ್ಯಕಾರಿಕೆಯು ಹೇಳುತ್ತದೆ. ಗೀತೆಯು ಏನೆನ್ನುತ್ತದೆ ಎಂದು ನೋಡೋಣ:- 'ಪಾರ್ಥ, ವೇದದ ಕರ್ಮಕಾಂಡದಲ್ಲಿ ಮೈಮರೆತು, ವೇದಕ್ಕಿಂತ ಹೆಚ್ಚಿನದೇನೂ ಇಲ್ಲವೆಂದು ವಾದಿಸುವ ಮೂರ್ಖರು........' * ಎಂಬದಾಗಿಯೂ 'ಸುತ್ತುಮುತ್ತಲೂ ನೀರು ತುಂಬಿರುವಾಗ ಬಾವಿಯು ಎಷ್ಟುಪಯೋಗಕ್ಕೆ ಬರುತ್ತದೋ, ಅಷ್ಟೇ ವೇದವೂ ಬ್ರಹ್ಮಜ್ಞಾನಿಯಾದವನಿಗೆ'‡ ಎಂಬದಾಗಿಯೂ, 'ವೇದವಚನಗಳಿಂದ ಭ್ರಮೆಗೊಂಡ ನಿನ್ನ ಬುದ್ಧಿಯು........'§ ಎಂಬದಾಗಿಯೂ ಅರ್ಜುನನಿಗೆ ಉಪದೇಶವಾಗಿದೆ. ಇಂತಹ ಎಷ್ಟೋ ಉದಾಹರಣೆಗಳನ್ನು ಆರಿಸಿ ಅವತರಿಸಬಹುದು. ಬರಬರುತ್ತ ಇಂಥ ಸ್ವಾತಂತ್ರ್ಯವಿಚಾರಗಳನ್ನು ಎಷ್ಟೋ ಜನರು ಮಾಡಿರುತ್ತಾರೆ. ಕಬೀರ, ಕಮಾಲ, ದಾದು, ನಾನಕ ಮುಂತಾದ ಮಹಾನುಭಾವರ ಉದಾರ ವಿವೇಚನೆಯೂ, ಅಂಧಶ್ರದ್ಧೆಗಿದಿರಾಗಿ ಅವರೆಬ್ಬಿಸಿದ ದಂಗೆಯೂ, ಪ್ರಾಚೀನ ಮತಗ್ರಂಥಗಳ ಸಾರ್ವತ್ರಿಕ ಗುಲಾಮಗಿರಿಗೆ ಅವರು ಹಾಕಿದ ಮುತ್ತಿಗೆಯೂ ಮಾನವ ಸಾಮಾನ್ಯನ ವಿಚಾರಾಚಾರವಿಮೋಚನೆಗಾಗಿ ಅವರು ಮಾಡಿದ ಯುದ್ಧವೂ ಅಷ್ಟು ಶ್ಲಾಘನೀಯವಾಗಿವೆ! ಇಂದು ಪಶ್ಚಿಮದೇಶಗಳಲ್ಲಿ 'ನಾವು ವಿಚಾರ ವಾಕ್ ಕಾರ್ಯ ಸ್ವಾತಂತ್ರ್ಯ ಸಮರಾಂಗಣದ ಅಪ್ರತಿಹತ ಯೋಧರು' ಎಂದು ಎದೆ ತಟ್ಟಿಕೊಳ್ಳುವವರಿಗೂ ಅಂದಿನ ಇವರ ಚರಿತ್ರೋಪದೇಶಗಳಲ್ಲಿ ಎಷ್ಟೋ ಬೆಳಕು ಇಂದೂ ದೊರೆಯಬಹುದು. ಒಂದು ಕಡೆಗೆ ಅತ್ಯಂತ ಮೌಢ್ಯ. ಇನ್ನೊಂದು

ಪ್ರಾಚೀನ ವಿಚಾರ ಸ್ವಾತಂತ್ರ್ಯ

---

‡ ಭಗವದ್ಗೀತೆ ೨-೪೯

§ ಸಾಂಖ್ಯಕಾರಿಕಾ ೩

* ಭಗವದ್ಗೀತೆ ೨-೪೨

‡ " ೨-೪೬

§ " ೨-೫೩

ಕಡೆ ವೇದಾಂತದ 'ಅಭೀಃ' ! 'ನೇತಿ' 'ನಾಯಮಾತ್ಮಾ ಬಲಹೀನೇನ ಲಭ್ಯಃ' 'ಮಮಾತ್ಮಾ ಸರ್ವಭೂತಾತ್ಮಾ ಮುಂತಾದವುಗಳ ಘಂಟಾ ಘೋಷ. ನಮ್ಮ ಕುದುರೆಗೆ ಮೂರು ಕಾಲು ಎಂದು ಜಿದ್ದುಮಾಡುವ ಹಟಮಾರಿತನವು ಸನಾತನ ಧರ್ಮದ್ದಲ್ಲ- ಎಂದು ನನ್ನ ಅಭಿಪ್ರಾಯ. ಹಿಂದಿನ ಕತ್ತಲೆಯೂ ಇಂದು ಮುಂದಿನ ಬೆಳಕಾಗಲಿಕ್ಕೆ ಯೋಗ್ಯವಾಗಿದೆಯೆಂದು ಸಾರುವ ಮೂರ್ಖತನವು ಸನಾತನ ಧರ್ಮದ್ದಲ್ಲ. ಸಂಸ್ಕರಣಸ್ವಾತಂತ್ರ್ಯದ ಮಾದರಿಯು ಎಲ್ಲಿಯಾದರೂ ಇದ್ದರೆ ಅದು ಸನಾತನ ಧರ್ಮದಲ್ಲಿ ಎದ್ದು ನಿಂತು ಕೈಯೆತ್ತಿ ಹಾದಿಯನ್ನು ತೋರಿಸುತ್ತಿದೆಯೆಂದು ನನ್ನ ಮತ. ಇಹಪರಗಳ ವಿಷಯದಲ್ಲಿ ಕುರುಡುನಂಬಿಕೆಯೂ ಒಂದು ಕಡೆ ಇದೆ; ಆದರೂ ಇನ್ನೊಂದು ಕಡೆ ಸ್ವರ್ಗನರಕದೇವಾಧಿದೇವರಿಗಿಂತಲೂ ಆತ್ಮವೇ ಹೆಚ್ಚಿನದು, ಅಂಥ ವಿಶಿಷ್ಟ ವಸ್ತುವನ್ನು ಮತಗ್ರಂಥಗಳು ಕಾಪಾಡಲಾರವು, ಆತ್ಮದ ಉದ್ಧಾರವು ಆತ್ಮವನ್ನೇ ಸೇರಿದೆ, ಎಂಬರ್ಥದ ಉಪದೇಶಗಳೂ ಒಂದೋ ಎರಡು ನಮ್ಮಲ್ಲಿ? ಈ ಆತ್ಮದ ಹೆಚ್ಚಳವೇ ನಿಚ್ಚಳವಾದ ಜ್ಞಾನದ ತೀರ್ಮಾನವೆಂದಲ್ಲವೆ ಈಗಿನ ಕೇವಲ ಹೇತುವಾದಿಗಳೂ ಹೇಳುವದು? ಅವರ ಸಿದ್ಧಾಂತಗಳಿಗಿಂತಲೂ ಕಡಿಮೆಯೋ ಗೀತೆಯ 'ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ" "ಉದ್ಧರೇದಾತ್ಮನಾತ್ಮಾನಂ" ಮುಂತಾದ ವಾಕ್ಯಗಳು? ಹಿಂದೀಯಲ್ಲಿ ಒಂದು ವಚನವಿದೆ.

"ವೇದ ಪುರಾನ ಕುರಾನ ಯಃ ಸಬ ಕಹಾನಿ।
ಗಂಗಾ ಜಮುನಾ ತೀರಥ ಯಃ ಸಬ ಪಾನಿ।
ತೊ ಮತ ಹೋ ಇನಕಾ ಅಭಿಮಾನಿ।
ಯಃ ಸಬ ಛೋಡ್ ಹೋ ಆತಮ ಗ್ಯಾನಿ॥

(ಅನುವಾದ:- ವೇದ ಪುರಾಣ ಕುರಾನಗಳೆಲ್ಲವೂ ಬರೇ ಹೇಳಿಕೆ. ಗಂಗಾ ಯಮುನಾ ಇತ್ಯಾದಿ ತೀರ್ಥಗಳೆಲ್ಲ ಬರೇ ನೀರು. ಇವುಗಳ ಅಭಿಮಾನವನ್ನಿಟ್ಟುಕೊಳ್ಳಬೇಡ. ಇವನ್ನೆಲ್ಲವನ್ನೂ ಬಿಟ್ಟು ಆತ್ಮಜ್ಞಾನಿಯಾಗು.)

ಎಂತಹ ವಿಚಾರ ಸ್ವಾತಂತ್ರ್ಯವಿದೆ ಈ ವಾಕ್ಯಗಳಲ್ಲಿ! ಸಜ್ಞಾನೋಪದೇಶಕ್ಕೆ ಮೇಲ್ಪಂಕ್ತಿಯು ಸಾವಿರಾರು ವರ್ಷಗಳ ಹಿಂದೆಯೇ ನಮ್ಮಲ್ಲಿಯೇ ಬಿದ್ದಿದೆ. ವ್ಯುತ್ಪತ್ತಿಮತಕ್ಕೆ ಸಾಕಷ್ಟು ಗೌರವವು ಉಪನಿಷತ್ ಕಾಲದಲ್ಲಿಯೆ ಇತ್ತು; ದಾರ್ಶನಿಕರೂ ಉಪಪತ್ತಿ ಮತದವರೇ; ಕೃಷ್ಣನೂ ವಿಶಿಷ್ಟ ಹೈತುಕನೇ* ಎಂದು ಒಮ್ಮೆ ಹೇಳಿಯೇ ಇದೆ. ಹಾಗೇ ಬುದ್ಧನೂ ವ್ಯುತ್ಪನ್ನವಿಚಾರಪ್ರಿಯನೇ. ಕಣ್ಣಿಗೆ ಬಿದ್ದುದರ ಮೂಲಕಾರಣವನ್ನೇ ಹಿಡಿದೆತ್ತುವ ರೀತಿಯು ಇವರದಾಗಿತ್ತು. ಮತ್ತು ರೀತಿಯಲ್ಲಿ ಎಂತಹ ವಿಶಾಲತೆ, ಔದಾರ್ಯ, ನಮ್ರತೆಗಳು! 'ನನ್ನ ಮತವೇ ನಿಜ, ಉಳಿಕೆಯವು ನರಕದ ಹಾದಿಗಳು' ಎಂಬ ದುರಭಿಮಾನದ ಸೊಲ್ಲು ಈ ರೀತಿಯ ವಿಚಾರಗಳಲ್ಲಿಲ್ಲ. ತಮ್ಮ

**ವ್ಯುತ್ಪತ್ತಿವಾದದ ಔದಾರ್ಯ**

ಪುಟ್ಟ ಕಣ್ಣು ಬುದ್ಧಿಗಳಿಗೇ ಇವರು ಸರ್ವಜ್ಞತೆಯನ್ನು ಕಲ್ಪಿಸಿಕೊಳ್ಳಲಿಲ್ಲ. ಸಕಲ ಇಂದ್ರಿಯ ಅಂತಃಕರಣಗಳಿಗೂ ಇವರು ಕೆಲಸ ಕೊಟ್ಟಿದ್ದಾರೆ. ಅವುಗಳ ನಿರ್ಮಲ ವ್ಯಾಪಾರಕ್ಕೆ ಬೇಕಾದಷ್ಟು ಅವಕಾಶವನ್ನಿತ್ತು ಅವುಗಳ ಮೂಲಕ ಸತ್ಯವನ್ನು ತಿಳಕೊಳ್ಳಲು ಯತ್ನಿಸಿದ್ದಾರೆ. ಆದರೂ ಸತ್ಯದ ಶೋಧಕ್ಕೆ ಇವೆಷ್ಟು ಬೆಳೆದರೂ ಇನ್ನೂ ಅವುಗಳಿಗೆ ಮಿತಿಯಿರುವದನ್ನು ಕಂಡು ಗಮ್ಯವನ್ನು ಅವಕ್ಕೂ ಮುಂದೆ ನ್ಯಾಯವಾಗಿಟ್ಟಿದ್ದಾರೆ. ತಮ್ಮ ಸಂಕುಚಿತ (ಸಂವಿತ್ತಿ) ಕರಣ*ಗಳಲ್ಲಿ ಅಪಾರವಾದ ಸತ್ಯವನ್ನು ಅಳೆಯುವದು ಎಂದರೆ ತಂಬಿಗೆಯಲ್ಲಿ ಸಮುದ್ರವನ್ನಿಳಿಸುವದೇ ಎಂದವರಿಗೆ ಸಂಪೂರ್ಣ ಮನವರಿಕೆಯಾಗಿತ್ತು. ಆದಕ್ಕಾಗಿ

---

* ಹೇತುವಾದಿ, ಅಂದರೆ ಪ್ರತಿ ವಿಷಯದ ಮೂಲವನ್ನು ಸಕಾರಣವಾಗಿ ಹುಡುಕಿ ನೋಡಲು ಎತ್ನಿಸುವವನು. Rationalist. ಉಪಪತ್ತಿ ಮತದವರು ವ್ಯುತ್ಪನ್ನ ವಿಚಾರದವರು ಅಂದರೂ ಹೈತುಕರೇ.

* ಕಣ್ಣು ಕಿವಿ ಮೂಗು ನಾಲಿಗೆ ಮುಂತಾದ ಇಂದ್ರಿಯಗಳೆಲ್ಲ ಹೊರಗಿನ ವಸ್ತುಗಳ ತಿಳವಳಿಕೆಯನ್ನು ಮಾಡಿಕೊಳ್ಳುವ ಕರಣಗಳು. ಈ ಕರಣಗಳ ಅನುಭವಕ್ಕೆ ಸಂವಿತ್ತಿ ಎಂದು ಹೆಸರು. Perpesction.

ಅವರು ತಮ್ಮ ಶೋಧಗಳೇ ಜ್ಞಾನವಿಜ್ಞಾನ ಪ್ರಪಂಚದ ಕಡೆಯ ಮಾತು- ಎಂದು ಹೇಳಲಿಲ್ಲ. ಅಷ್ಟೇ ಏಕೆ ತಮ್ಮ **ಶೋಧಗಳನ್ನು ಅವರು ಜಗತ್ತಿಗೆ ಬೋಧವನ್ನಾಗಿ ಸಹ ಕೊಟ್ಟಿಲ್ಲ.** ಅವನ್ನು ಅವರು ತಮ್ಮ ವಿಚಾರಗಳು ಅನುಭವಗಳು ಎಂದು ಬರೆದಿಟ್ಟರು. 'ಇದೇ ಸತ್ಯ'ವೆಂಬ ಧ್ವನಿಯಿಲ್ಲ. ಅವುಗಳಲ್ಲಿ ತಮ್ಮ ಅನುಭವಗಳು ಸಾಗರದಷ್ಟು ವಿಶಾಲವಾಗಿದ್ದರೂ ಗಮ್ಯವು ಇನ್ನೂ ಅತೀತವೇ ಆಗಿದೆ ಎಂದವರು ಕೂಗಿ ಹೇಳಿದರು. ಅವರು ಅದ್ಭುತ ಅನುಭವಗಳನ್ನಿಟ್ಟುಕೊಂಡರೂ 'ನೇತಿ' ಎಂದರೇ ಹೊರತು "ಇತಿ" ಎಂದು ಹೇಳಲಿಲ್ಲ ಗಮ್ಯಕ್ಕೆ.

'ಹೀಗೇ' ನಡೆದರೆ ಮುಕ್ತಿ ಗಮ್ಯದರ್ಶನ ಎಂದು ಹೇಳುವದು ಪೂರ್ಣ ದುರಭಿಮಾನ. ಹಾಗೆ ಸಾರುವ ಮತಗಳೂ ಗುರುಗಳೂ ಲೋಕವೈರಿಗಳೇ. ಸತ್ಯದ್ವೇಷಿಗಳೂ ದೇವದ್ರೋಹಿಗಳೂ ಅವರೇ. ಯಾಕೆಂದರೆ ಸತ್ಯವೇ ದೈವ ಅಲ್ಲವೇ? ಅಂತಹದನ್ನು ಸಂಕುಚಿತ ವ್ಯಕ್ತಿಯಲ್ಲಿ ಹೂತಿಡುವವರು ದೇವದ್ರೋಹಿಗಳಲ್ಲದಿನ್ನೇನು? ಅಂಥವರು ದೇವಧರ್ಮಗಳನ್ನು ಉಪದೇಶಿಸುವದೆಂದರೆ ಅಧಿಕಪ್ರಸಂಗವೇ ಅಲ್ಲವೇ? ಸರ್ವವ್ಯಾಪಿಯಾದ ಸರ್ವಜ್ಞತ್ವಸ್ವರೂಪವಾದ ಅನಾದಿ ಚೈತನ್ಯದ ಸಂಪೂರ್ಣ ಜ್ಞಾನವು ತಮ್ಮ ತಿಳವಳಿಕೆಯ ಚಿಕ್ಕ ಮೇರೆಗಳೊಳಗೇ ಇದೆ ಎಂದು ಭಾವಿಸಿಕೊಳ್ಳುವ ಅವಿವೇಕಿಗಳು, ಮತ್ತು ಹಾಗೆ ಭಾವಿಸಿಕೊಂಡು ತಮಗೆ ತಿಳಿದಿರುವ ನಾವು ಸಾರುತ್ತಿರುವ 'ಇದೇ' **ಅದು** ಪರಮಾತ್ಮ ಎಂದು ಉಪದೇಶಿಸುವ ದುರಹಂಕಾರಿಗಳು ಆ ಪರಮಶಕ್ತಿಯನ್ನು ನಿಂದಿಸುವವರೊ ವಂದಿಸುವವರೊ?

**ಇತಿ-ನೇತಿಗಳ ಪರಿಣಾಮ**

ಅಪಾರ ನಿಸ್ಸೀಮವಾದುದನ್ನು ಮೇರೆಕಟ್ಟುಗಳೊಳಗೆ ಸೆರೆಯಿಟ್ಟು ಮೆರೆಯಲೆತ್ನಿಸುವವರೋ ಜ್ಞಾನವನ್ನು ಉಪದೇಶಿಸುವದಕ್ಕೆ ಅಧಿಕಾರಿಗಳು.

'ಇದು ನಮಗೆ ತಿಳಿದುದು ನಾವು ಹೇಳುತ್ತಿರುವದೇ ನಿಜ. ಬಾಕಿ ಎಲ್ಲ ಸುಳ್ಳು' ಎಂದುಪದೇಶಿಸುವವರಿಂದ ಜಗತ್ತಿನಲ್ಲಿ ಎಂಥ ಅನಾಹುತಗಳಾಗುತ್ತಿವೆ! ಆನೆಯನ್ನು ಕೈಯಿಂದ ಮುಟ್ಟಿ

ತಿಳಿದುಕೊಂಡು ಕಾದಾಡಿದ ಕುರುಡರಂತೆ ಈ ಉಪದೇಶಕರು! ಕಾಲು ಮುಟ್ಟಿದವನು ಆನೆಯು ಕಂಬದಂತಿವೆಯೆಂದನಂತೆ. ಬಾಲ ಮುಟ್ಟಿದವನು ಹಗ್ಗದಂತಿದೆಯೆಂದನಂತೆ. ಕಿವಿ ಮೈ ಮುಟ್ಟಿದವನು ಅದು ಮೊರದಂತಿದೆಯೆಂದನಂತೆ. **ಅಭಿಮಾನವೇನೋ ಪ್ರತಿಯೊಬ್ಬ ಸಾಮಾನ್ಯ ವ್ಯಕ್ತಿಗೂ ಬಿಟ್ಟಿದ್ದಲ್ಲ, ತಿಳವಳಿಕೆ ಮಾತ್ರ ಸರಿಯಾಗಿಲ್ಲ. ಇಂತಹ ಸ್ಥಿತಿಯಿದ್ದಲ್ಲಿ ಜಗಳವೂ ಬಿಟ್ಟಿದ್ದಲ್ಲ.** 'ಇದೇ ಹಾದಿ' ಎಂದುಪದೇಶಿಸುವವರ ಮತದಿಂದ ಜಗತ್ತಿಗೆ ಬಿಟ್ಟರೆ ಆಗುವ ಕಲ್ಯಾಣವೆಂದರೆ ಜಗಳಮಾತ್ರವೇ. ಆ ಕುರುಡರು ಆನೆಯ ಏಕ ಭಾಗವನ್ನಾದರೂ ಅರಿತಿದ್ದರು. ಈ ಮತೋಪದೇಶಕರೊ, ಒಂದು ಭಾಗವನ್ನಾದರೂ ಚನ್ನಾಗಿ ತಿಳಿದುಕೊಂಡಿಲ್ಲ. ಪ್ರತಿಯೊಬ್ಬ ಕುರುಡನೂ ತನ್ನ ಭಾಗವನ್ನು ಕುರಿತು ಅನುಭವಿಸಿದವನೇ. ಆದುದರಿಂದ 'ಆನೆ ಎಂದರೆ ಇದೆ ಹೇಗೆ' ಎಂದು ಆತನು ತನ್ನ ಅನುಭವಕ್ಕೆ ಬಂದ ಭಾಗವನ್ನು ವರ್ಣಿಸಿದರೆ ಅದರಲ್ಲಷ್ಟು ತಪ್ಪಿಲ್ಲ. ತಪ್ಪೆಲ್ಲಿದೆ ಮತ್ತೆ? **ಇನ್ನೊಬ್ಬನೂ ನೋಡಿದ ಭಾಗದ ಅನುಭವವನ್ನು ತಿರಸ್ಕರಿಸುವದರಲ್ಲಿದೆ.** ಆದರೆ ಮತೋಪದೇಶಕರು ತಾವಾದರೂ ಒಂದು ಭಾಗವನ್ನೂ ಸಹ ಅನುಭವಿಸದೆಯೇ, ತಮ್ಮ ಊಹೆಯನ್ನೋ ನಂಬಿಕೆಯನ್ನೋ ಸತ್ಯವೆಂದು ಇಟ್ಟುಕೊಂಡು ಇತರರನ್ನೆಲ್ಲ ಸುಳ್ಳರು, ಅವಿಚಾರಿಗಳು, ನರಕದ ಹಾದಿಗೆ ಬಿದ್ದಿರುವವರು ಎಂದು ಹೀಯಾಳಿಸುತ್ತಾರಲ್ಲಾ! ಅತ್ಯಾಶ್ಚರ್ಯವೇ!! ಇಂಥವರು ತಮ್ಮ ಅವಿದ್ಯಾ ಅಲೀಕತೆಗಳಿಗೇ ಅದ್ಭುತ ಜ್ಞಾನವೆಂದಿಟ್ಟುಕೊಂಡು ಬೇರೆಯವರನ್ನು ತಮ್ಮ ಮಾಯಾಪ್ರಪಂಚಕ್ಕೆಳೆದು ಉದ್ಧರಿಸಲೆತ್ನಿಸುತ್ತಾರೆ! ತಮ್ಮ ಮೃಗಜಲ ಪ್ರವಾಹದಲ್ಲಿ ಇತರ ಮತಾನುಯಾಯಿಗಳನ್ನು ಸ್ನಾನಪಾನಕ್ಕಾಗಿ ಕರೆಯುತ್ತಾರೆ! ತಾವೇ ಮೋಸಹೋದ ಇವರ ವಾದವಿವಾದಗಳಿಗೆ ಇತರರು ಸಮ್ಮತಿಸುವದಿಲ್ಲವಾದರೆ ಮತ್ತೆ ಜಗಳಕ್ಕೇ ಪ್ರಾರಂಭ. ದೇಹಕ್ಕೆ ಸೇರಿದ ಪಶುಬಲದಿಂದ ಸಂಖ್ಯಾಬಲದಿಂದ ಇತರರನ್ನು ಹಠಾತ್ತಾಗಿ 'ಅವರ ಆತ್ಮೋದ್ಧಾರ

ಮತವು ಸತ್ಯಕ್ಕಾಗಿಯೋ

ಸತ್ಯವು ಮತಕ್ಕಾಗಿಯೋ?

ಕ್ಕಾಗಿಯೇ † ತಮ್ಮ ಮತಕ್ಕೆಳೆಯಲು ಯತ್ನಿಸುತ್ತಾರೆ. ಅದಕ್ಕಾಗಿ ಎಷ್ಟು ವಿಧವಾದ ಹಿಂಸೆಗಳು! ಅವೆಲ್ಲವೂ 'ನಾಸ್ತಿಕರ ಆತ್ಮವನ್ನುದ್ಧರಿಸುವದಕ್ಕಾಗಿಯೇ!!' **ತಮ್ಮ ಮತಕ್ಕೆ ತಲೆಬಾಗಿಸಿದವರೆಲ್ಲರೂ ನಾಸ್ತಿಕರೇ.** ಮುಹಮ್ಮದೀಯರಿಗೆ ಇತರರು 'ಕಾಫಿರ್' ಜನರು. ಕ್ರೈಸ್ತರಿಗೆ ಇತರರು ಹಿದನ್‌ರು 'ಇನ್‌ಫಿಡೆಲ್'ರು. ಸನಾತನಗಳಿಗೆ ಇತರರು ಮ್ಲೇಚ್ಛರು, ಶೂನ್ಯವಾದಿಗಳು, ಚಾರುವಾಕರು, ಅಸುರರು ಇತ್ಯಾದಿ ಇತ್ಯಾದಿ! ಎಲ್ಲ ಮತದವರೂ (ಈಗಿನ ಸನಾತನ ಧರ್ಮಾನುಯಾಯಿಗಳನ್ನು ಬಿಟ್ಟು) ಇತರರನ್ನು ತಮ್ಮ ಸಂಗತಕ್ಕೆಳೆಯಬೇಕು, ಇಲ್ಲವಾದರೆ ಅವರನ್ನು ಅಧೀನವಾಗಿಟ್ಟುಕೊಳ್ಳಬೇಕು ಎಂದೆನ್ನುವರೇ. ಮತವ್ಯತ್ಯಾಸವಿದ್ದಲ್ಲಿ ಸಮಾನ ಸ್ಕಂದತೆಯಿರಕೂಡದಂತೆ. ಇದೇ ಅಂಥ ಮತಾಭಿಮಾನಿಗಳ ರೀತಿ. **ಇವರಿಗೆ ಬೇಕಾದುದು ಮತ ಅಲ್ಲದೆ ಸತ್ಯವಲ್ಲ.** ಮತವು ಸತ್ಯಕ್ಕೆ ಹಾದಿಯೋ? ಅಥವಾ ಸತ್ಯವೇ ಮತಕ್ಕಾಗಿಯೋ? ಯಾವುದು ಅಧೀನವಾಗಿರಬೇಕು? ಯಾವುದು ಪ್ರಧಾನವಾಗಿರಬೇಕು? ಕಾರಣವಾದಕ್ಕೆ ಶೋಧವೇ ಪ್ರಿಯ, ಅಲ್ಲದೆ ಇತರರಿಗೆ ಬೋಧ ಮಾಡುವದಲ್ಲ. **ಸಜ್ಞಾನವಾಗಿ ಸಯುಕ್ತಿಕವಾಗಿ ಬಂದದ್ದೆಲ್ಲವೂ ಅದಕ್ಕೆ ಪ್ರಿಯುವೇ ಸಜ್ಞಾನಕ್ಕೆಲ್ಲ ಕಡೆಗಳಿಂದಲೂ ಸ್ವಾಗತವೇ ಹೇತುವಾದಿಗಳ ರಾಜ್ಯದಲ್ಲಿ.** ಹೈತುಕರು ಸತ್ಯಪ್ರಿಯರು ಮತಪ್ರಿಯರಲ್ಲ. ಯಥಾರ್ಥವಾಗಿರುವ ಎಲ್ಲ ಮತಗಳನ್ನೂ ಆ ಒಂದು ಸತ್ಯವನ್ನರಿಯುವ ಪ್ರಯತ್ನವೆಂದವರು ಭಾವಿಸುತ್ತಾರೆ. ಕೇವಲ ಸತ್ಯವು ಅಗೋಚರವಾಗಿರೋಣದರಿಂದ, ಧರ್ಮದಲ್ಲಿ, ಮತದಲ್ಲಿ ಆ ಸತ್ಯವು ರೂಪುಗೊಂಡು ಕುಳಿತುಬಿಟ್ಟದೆಂದು ಅವರು ನಂಬುವದಿಲ್ಲ. ಕೃಷ್ಣನ 'ಕರ್ಮಣ್ಯೇ

**ನಾಸ್ತಿಕರು ಯಾರು?**

---

† ಪ್ರತಿಮತದ ಅಭಿಮಾನಿಗಳೂ ಇನ್ನೊಬ್ಬರನ್ನು ಹಿಂಸಿಸಿದಾಗ ಕೊಂದಾಗ ತಮ್ಮ ಪಶುತ್ವದ ಆಹುತಿಗಳ ,,ಆತ್ಮೋದ್ಧಾರಕ್ಕಾಗಿಯೇ'' ತಮ್ಮ ದಂಡನೆ ಎಂದು ಭಾವಿಸಿದ್ದಾರೆ. ಈ ಭಾವದಿಂದ ದೊಡ್ಡ ದೊಡ್ಡ ಯುದ್ಧಗಳೇ ನಡೆದಿವೆ ನಮ್ಮಲ್ಲಿಯ ಧರ್ಮಯುದ್ಧಗಳೂ, ಕ್ರೈಸ್ತರ ,ಕ್ರೂಸೆಡ್' ಗಳೂ ಮುಸಲ್ಮಾನರ ,ಜಿಹಾದ್' ಗಳೂ ,ನಾಸ್ತಿಕರ ಆತ್ಮೋದ್ಧಾರಕ್ಕಾಗಿಯೇ' ಎಂದು ಸ್ವಪ್ರತಿಷ್ಠಿತ ಧರ್ಮಾತ್ಮರ ಮತ.

ಮಾಧಿಕಾರಸ್ತೇ ಮಾಫಲೇಷು ಕದಾಚನ' * ಎಂಬುಪದೇಶವನ್ನು ನಿಜವಾಗಿಯೂ ಆಚರಿಸುವವರೆಂದರೆ ಅವಿವೇಕಿಗಳಿಂದ ನಾಸ್ತಿಕರೆಂದು ಹೀಯಾಳಿಸಲ್ಪಡುವ ಈ ಸತ್ಯಪ್ರಿಯರೇ. **ಕರ್ಮವನ್ನು ಮಾಡಿಯೇ ತೀರಬೇಕು. ಆದರೆ ಅದನ್ನು ಮಾಡುವದು ಕರ್ಮಕ್ಕಾಗಿಯೇ ಅಲ್ಲ, ಗಮ್ಯಕ್ಕಾಗಿ.** ಕರ್ಮರತನಕ್ಕಾಗಿ ಮಾಡುವ ಕರ್ಮವು ಬಂಧನವೆಂಬದು ಹೈತುಕರಿಗೆ ಗೊತ್ತು. ಅವರಿಗೆ **ಕರ್ಮವೆಂದರೆ ಅವರ ಸದ್ಯದ ಜ್ಞಾನಜ್ಯೋತಿಯ ಸಾಕ್ಷಿ, ಬಿಂಬ; ಮುಂದಿನ ಜ್ಞಾನಕ್ಕೆ ಸೋಪಾನ.** ಅವರು ಕರ್ಮವನ್ನು ವಿನಿಯೋಗಿಸಿ ನೈಷ್ಕರ್ಮಿಗಳಾಗುತ್ತಾರೆ. ಬುದ್ಧಿಯು ಕರ್ಮದಿಂದ ಶುದ್ಧಗೊಳ್ಳುತ್ತದೆ. ಹಾಗಾದ ಮೇಲೆಯೇ ತನಗೆ ಬೇಕಾದ ಸಮುತ್ಸವು ಅನುಭವಕ್ಕೆ ಬರುವದು. ಹಾಗಿರುವಾಗ ಅವರು ಕರ್ಮವನ್ನೇ ಪ್ರಧಾನವಾಗಿಟ್ಟುಕೊಂಡಾರೋ? ಅಥವಾ ಸೋಪಾನಸಾಕ್ಷಿಗಳಾಗಿ ಮಾತ್ರ ಇಟ್ಟುಕೊಳ್ಳುವರೋ? ಕರ್ಮದಲ್ಲಿಯೇ ಅವರಿಗೆ ಹೆಚ್ಚಿನ ಗೌರವವಿಲ್ಲದಿರುವಾಗ ಅವರ ಕಣ್ಣಿಗೆ ಫಲವು ಹೆಚ್ಚಾಗಿ ಕಾಣುವದೋ? ಮಾಡಿದ ಕರ್ಮಫಲವೇನೋ ತಾನಾಗಿಯೇ ಬಾರದಿರುವದಿಲ್ಲ. ಅದರ ಪರಿಣಾಮವು ಹೊರಗೊಂದಿದೆ ಒಳಗೊಂದಿದೆ. ಅವರಿಗೆ ಮುಖ್ಯ ಒಳಗಿನವೇ. ಹೊರಗೆ ಜಯಾಪಜಯಗಳೆರಡೂ ಇವೆ. ಆದರೆ **ಕರ್ತೃವಿಷಯುಕ ಫಲವನ್ನು ನೋಡಿದರೆ ಯಥಾರ್ಥ ಕರ್ಮಕ್ಕೆ ವಿಕಾಸವು ತಪ್ಪಿದ್ದೇ ಅಲ್ಲ.** ‡ ಅದಕ್ಕಾಗಿ ಅವರು ಈ ಒಳಗಿನ ಪರಿಣಾಮವನ್ನೇ ದಿಟ್ಟಿಸಿ

* ಗೀತೆ ೨–೪೭

‡ ಒಬ್ಬನೊಂದು ಪರೀಕ್ಷೆಗೆ ಯಥಾರ್ಥವಾಗಿ ಅಭ್ಯಾಸಮಾಡಿದನೆಂದಿಟ್ಟುಕೊಳ್ಳೋಣ, ಹಾಗೆ ಮಾಡಿಯೂ ತೇರ್ಗಡೆಯನ್ನು ಪಡೆಯಲಿಲ್ಲ. ಇದಕ್ಕೆ ಅಪಜಯ ಎಂದು ಮೂರ್ಖರು ಹೇಳುವರು. ಯಾಕೆಂದರೆ ಆತನ ಅಭ್ಯಾಸದ ದೃಶ್ಯ ಪಾರಿತೋಷಕ, ಬಾಹ್ಯಪರಿಣಾಮ, ಕರ್ಮವಿಷಯುಕವಾದದ್ದು ಆತನಿಗೆ ಬರಲಿಲ್ಲ. ಆದರೆ ಆತನಿಗೆ ಅಭ್ಯಾಸದಿಂದ ಜ್ಞಾನವು ಪಾಲಿಗೆ ಬಿದ್ದ ಆದಾಯವೋ ಅಲ್ಲವೋ? ಇಲ್ಲಿ ಜಯವೋ ಅಲ್ಲವೆ ಆತನಿಗಿರುವದು? ಕರ್ತೃವಿಷಯುಕವಾದ ಈ ಆದಾಯದ ಕಡೆಗೆ ಕರ್ಮಯೋಗಿಗಳ ದೃಷ್ಟಿ ಮತ್ತು ವಿಚಾರದಿಂದ ಮಾಡಿದ ಕರ್ಮಕ್ಕೆ ಈ ಫಲವು ಎಂದೂ ತಪ್ಪಿದ್ದೇ ಅಲ್ಲ 'ನಹಿ ಕಲ್ಯಾಣ ಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ' (ಗೀತೆ ೬–೪೦) ಕಲ್ಯಾಣಕ್ಕೆ ಕೈಹಾಕಿದವನೆಂದಿಗೂ [ಅಂದರೆ ಜಯಾಪಜಯಗಳಲ್ಲಿಯೂ] ದುರ್ಗತಿಯಿಲ್ಲವೆಂಬುದರ ಸಾರವಿಲ್ಲಿದೆ.

ನೋಡುವರು. ಹೊರಗಿನ ಪ್ರಪಂಚದಲ್ಲಿಯ ಸಿದ್ಧಿಅಸಿದ್ಧಿಗಳೆರಡೂ ಒಂದೇ ಅವರಿಗೆ. ಅವರಿಗೆ ಫಲದಲ್ಲಿ ವಿಶೇಷ ಆಸಕ್ತಿಯಿಲ್ಲ. ಬಾಹ್ಯದಲ್ಲಿ ಆಶೆಯಿಲ್ಲ. ಆದರೆ **ನಿರ್ಮಲ ಜ್ಞಾನದಲ್ಲಿ ಮಾತ್ರ ಆಸಕ್ತಿಯು ಬಿಟ್ಟದ್ದಲ್ಲ.** ಈ ವಿಶಿಷ್ಟ ಆಸಕ್ತಿಯೇ ಬಾಹ್ಯ ಕನಿಷ್ಠ ಫಲಾಸಕ್ತಿಯನ್ನುದುರಿಸಿ ಬಿಡುವ ಶಕ್ತಿ. ಈ ಆಸಕ್ತಿಯನ್ನು ಬೆಳೆಸಬೇಕಾದರೆ ಬೇಕಾದುದು ಅಧಿಕಾರ, ಆಕ್ರಮಣಗಳಲ್ಲ; **ಅಮಾಯಾವೃತ್ತಿ, ನಿಷ್ಕಾಪಟ್ಯ, ಸರಲತೆ, ಯಥಾರ್ಥ ಪ್ರಯತ್ನ. ನಿಸ್ಸೀಮ**ವನ್ನು ಸೀಮಾಬದ್ಧವಾಗಿಟ್ಟುಕೊಂಡಂತೆ ಉಪದೇಶಿಸುವ ಮತಗಳಲ್ಲಿ ಅವರಿಗೆ ವಿಶ್ವಾಸವಿಲ್ಲ. 'ಪಾರ್ಥ, ಆಸಕ್ತಿಯನ್ನು ಬಿಟ್ಟು ಯೋಗಾರೂಢನಾಗಿ ಸಿದ್ಧಿ ಅಸಿದ್ಧಿಗಳನ್ನು ಒಂದೇ ಎಂದು ಭಾವಿಸಿ ಕರ್ಮಗಳನ್ನು ಮಾಡು. ಬುದ್ಧಿಯ ಸಮತ್ವವೇ ಯೋಗ. ಬುದ್ಧಿಯ ಈ ಸಮತ್ವಯೋಗಕ್ಕಿಂತಲೂ ಬರೇ ಕರ್ಮವು ಹೀನವಾದದ್ದು, ಆದುದರಿಂದ ಸಮಬುದ್ಧಿಯನ್ನು ಪಡೆ. ಫಲಾಪೇಕ್ಷೆಯುಳ್ಳವರು ಕನಿಷ್ಠರು. * ಎಂದು ಅರ್ಜುನನಿಗೂ ಈ ಹಾದಿಯ ಉಪದೇಶವಾಗಿದೆ. ಈ ಹಾದಿಯಲ್ಲಿ ಒಣ ನಂಬಿಕೆಯು ಉಪಯೋಗದ್ದಲ್ಲ. ವಿವೇಕವೇ ಬೇಕಾದದ್ದು. ಅನುಭವವೇ ಸಮಾಧಾನಕಾರಿ ಅಲ್ಲದೆ ಅಂಧಶ್ರದ್ಧೆಯಲ್ಲ. ಇಲ್ಲಿ ವೈಷಮ್ಯ ಭೇದಖೇದಗಳಿಗೆ ಅವಕಾಶವಿಲ್ಲ. ಮತಗಳಲ್ಲಿಯ ಅಂಧಶ್ರದ್ಧೆಯಿಂದುಂಟಾದ ಹಾನಿಗಳಿಂದ ಬೆಂದುಬೆಂಡಾಗಿಯೇ ಹಲ ಕೆಲವು ವಿಚಾರಶೀಲರು ಕಾರಣವಾದಿಗಳು ತಮ್ಮ ಮತಗಳಿಗೆ ಯುಕ್ತಿಯ ಶಾಖೆಗಳನ್ನುಂಟುಮಾಡಿದರು. ಮುಹಮ್ಮದೀಯಲ್ಲಿಯ 'ಸೂಫಿ' ಮತ್ತು ಕ್ರೈಸ್ತರಲ್ಲಿಯ 'ಕ್ರಿಶ್ಚನ್ನ ಸಾಯನ್ಸ' ಮುಂತಾದ ಹೊಸ ಪಕ್ಷಗಳಿಗೂ ಇಂತಹ ಮನೋವೃತ್ತಿಯೇ ಮೂಲ. **ಮೂಲ ಮತಾಭಿಮಾನದ ಕ್ರೂರ ಸಂಕೋಚವು ಈ ಯುಕ್ತ ಮತಗಳಿಂದ ಸಡಿಸಲ್ಪಟ್ಟಿದೆ.** ಅವು ಹಬ್ಬಿದಂತೆ ಅನುಯಾಯಿಗಳ ಮುದುರಿದ ಹೃದಯವೂ ಅರಳುತ್ತ ಹೋಗುತ್ತಿದೆ. ಹಾಗೇ ಜಗತ್ತಿನಲ್ಲಿ ಪ್ರೇಮ ಸಹಿಷ್ಣುತೆಗಳು ಬೆಳೆಯುತ್ತಿವೆ. **ಉಪಪತ್ತಿಯ ಕಡೆಗೇ ಹರಿಯುವ**

ಜಗಳವಿಲ್ಲದ ರೀತಿ

---

* ಗೀತೆ ೨—೪೮,೪೯

**ಮನಸ್ಸಿನಿಂದಲೇ ಜಗಳಗಳು ಮುಗಿಯಬೇಕು. ಜಗತ್ತಿನಲ್ಲಿ ಸುಖಸಂಪತ್ತಿಗಳು ಬೆಳೆಯಬೇಕು. ವ್ಯಕ್ತಿಗೂ ಮುಕ್ತಿಪಥವು ಸಿಗಬೇಕು.** ಆದುದರಿಂದ ಎಲ್ಲ ಮತಗಳ ಮತ್ತು ಅವುಗಳ ರೀತಿ, ನೀತಿ, ಗಮ್ಯಗಳ ಮೂಲವನ್ನು ಸಾಧ್ಯವಾದಷ್ಟು ಮಟ್ಟಿಗೆ ಈಗ ವಿವೇಚಿಸಿ ನೋಡೋಣ.

---

## ೩ನೆಯ ಪ್ರಕರಣ.

# ದೇವರ ಮೊದಲು ತೊದಲು.

ಮತಧರ್ಮಗಳು ಜೀವಿಯ ಪ್ರಕೃತಿ ಪರಿಸ್ಥಿತಿಗಳಲ್ಲಿವೆ. ಧರ್ಮದ ಪ್ರೇರಣೆಯೂ ಇವುಗಳಲ್ಲಿಯೇ ಇದೆ. ಅವನ್ನರಿಯದಿದ್ದರೆ ಸಂಸ್ಕರಣ ಸುಧಾರಣೆಗಳಿಗಾಗಿ ಅವಕಾಶವು ದೊರಕದು. ಪ್ರಕೃತಿ ಪರಿಸ್ಥಿತಿಗಳೇ ಮಾನವನನ್ನು ಒಂದು ಯಂತ್ರದಂತೆ ತಿರುಗಿಸುತ್ತವೆ. ಅವನು ಇವಕ್ಕೆ ಅಧೀನನಾಗಿರುವನಾದರೂ ಅವುಗಳನ್ನು ತಿಳಿದುಕೊಳ್ಳಬಲ್ಲನು. ಮತ್ತು ಹಾಗೆ ತಿಳಿದುಕೊಳ್ಳುವದರಲ್ಲಿಯೇ ಅವನ ಪ್ರಗತಿಯೂ ಇದೆ. ಈ ವಿಷಯವನ್ನು ಮುಂದೆ ಬೇರೆಯಾಗಿ ಚರ್ಚಿಸಲಾಗುವದು. ಅವನು ಸಾಕ್ಷಿಯಾಗಿದ್ದುಕೊಂಡು ತನುಮನಸ್ಸುಗಳ ವ್ಯಾಪಾರಗಳನ್ನು ತಿಳಿಯಬಲ್ಲವನಾದರೂ **ಆತನು ಕೇವಲ ಸ್ವತಂತ್ರನಲ್ಲ.** ಪ್ರಕೃತಿಯಲ್ಲಿದ್ದು ಪ್ರಕೃತಿಗೇ ಸೇರಿದ ತನುಮನಗಳನ್ನಿಟ್ಟುಕೊಂಡವನಾಗಿದ್ದುಕೊಂಡೂ ಆ ಪ್ರಕೃತಿಯಿಂದ ಬೇರೆಯಾಗಲಾರನು; ತನುಮನಸ್ಸಿನಲ್ಲಿರುವತನಕ ಅದಕ್ಕತೀತನಾಗಲಾರನು. ಆದರೂ ಅದರಲ್ಲಿದ್ದು ತನ್ನ ಉಪಾಯಗಳಿಂದ ಹೆಚ್ಚಿನ ಸುಖವನ್ನು ಪಡೆಯಬಲ್ಲನು. ಸುಖವೇ ಅಲ್ಲವೆ ಎಲ್ಲ ಜೀವಿಗಳಿಗೂ ಬೇಕಾದದ್ದು? ಆ ಸುಖಕ್ಕಾಗಿ ಜೀವಿಗಳು ಇತರರ ಜೀವಿಗಳಿಗೆ ಎಷ್ಟೋ ಕಷ್ಟನಷ್ಟಗಳನ್ನುಂಟುಮಾಡುವವು. ಅದು ಆ ಜೀವಿಗಳಿಗೆ ತಿಳಿಯುವದೂ ಇಲ್ಲ. ಆದರೆ ಮಾನವಜೀವಿಯು ತನಗೆ ವಿಶೇಷವಾಗಿರುವ ಬುದ್ಧಿ

ಯಿಂದ ಅದನ್ನು ತಿಳಕೊಂಡು ತನ್ನ ಮಾನವ್ಯದ ಅರಿವು ಹುರುಪುಗಳಿಂದ ತನ್ನ ಸುಖವನ್ನು ಹೆಚ್ಚಿಸಿಕೊಳ್ಳುವನು. ಇತರ ಹಲಕೆಲವು ಜೀವಿಗಳಲ್ಲಿ ಸಹ ಈ ಉಪಾಯವಿಲ್ಲವೆಂತಿಲ್ಲ. ಆದರೆ ಮನುಷ್ಯನು ಇದನ್ನು ಚನ್ನಾಗಿ ಬೆಳೆಸಿರುತ್ತಾನೆ. **ಅತ್ಯಲ್ಪ ಪ್ರಯತ್ನದಿಂದ ಅತ್ಯುತ್ತಮ ಲಾಭವನ್ನು ಪಡೆಯುವ ವೃತ್ತಿಯು ಅವನ ಬುದ್ಧಿಯ ಪ್ರಕೃತಿಗೇ ಸೇರಿದ್ದಾಗಿದೆ.** ಈ ವೃತ್ತಿಯಲ್ಲಿಯೇ ಧರ್ಮವು ಹುಟ್ಟಿ ಬೆಳೆದಿದೆ. ಆನ್ವೀಕ್ಷಕೀ ಮತ್ತು ಮಾನವಜಾತಿಗಳು ಶಾಸ್ತ್ರಗಳು ಇಂದು ಬಹಳವಾಗಿ ಬೆಳೆಯುತ್ತಿವೆ. ಅವುಗಳು ಸಹ ಧರ್ಮದ ಮೊದಲನ್ನು ಪ್ರಾಚೀನ ಮಾನವನ ಪ್ರಕೃತಿಯಲ್ಲಿಯೇ ನಿರ್ಧರಿಸಿವೆ. ಅದನ್ನು ಮನುಷ್ಯನು ಬರಬರುತ್ತ ಬೇಕುಬೇಕೆಂದು ಬೆಳೆಸಿ ಮತಗಳನ್ನುಂಟು ಮಾಡಿದರೂ ಅವುಗಳ **ಧಾತು ಏನೋ ಪ್ರಕೃತಿಯಲ್ಲಿಯೇ ಇದೆ.** ವಸ್ತು ಮಾತ್ರ ನೈಸರ್ಗಿಕವಾಗಿಯೇ ಇದೆ. ಮತಾಚಾರ್ಯರು ಮುಂದೆ ಅದಕ್ಕನೇಕ ಕೃತ್ರಿಮ ರೂಪಗಳನ್ನು ಕೊಟ್ಟು ಮತಗಳನ್ನು ಮಾಡಿರಬಹುದು. ಆದರೂ ಮತಗಳು ದೇವರಿಂದಲೂ ಬರಲಿಲ್ಲ. ಆಕಾಶದಿಂದಲೂ ಬರಲಿಲ್ಲ. ಸಹಜವಾಗಿ ಸುಖಪ್ರಿಯನಾಗಿರುವ ಮನುಷ್ಯನ ಬುದ್ಧಿ ಅವಶ್ಯಕತೆಗಳಿಂದಲೇ ಹುಟ್ಟಿವೆ. ವಸ್ತು ಇಲ್ಲಿಂದೆ. ಮೂಲ ಧಾತು ಇಲ್ಲಿಂದೆ, ಇದನ್ನು ಕುರಿತು ಕೃಷ್ಣನು ಸಹ "ಪ್ರಕೃತಿಯ ಗುಣಗಳಿಂದ ಕರ್ಮಗಳು ತಾವೇ ಆಗುತ್ತವೆ. ಹಾಗಿರುವಾಗ ಮೂಢನು ಅಹಂಕಾರ ಬುದ್ಧಿಯಿಂದ ಮಾಡುವವನು ತಾನೇ ಎಂದು ತಿಳಿಯುವನು.'' * ಎಂದಿದ್ದಾನೆ. ಧರ್ಮಗೂ ಕರ್ಮಗಳೇ. ಆದೂ ಪ್ರಕೃತಿಯ ಬಲಾತ್ಕಾರದಿಂದಲೇ ಮಾನವನ ಮನಸ್ಸಿನಲ್ಲಿ ಉದಯಿಸಿದೆ. ಅವು ಗೋಕರ್ಮಗಳಿಂದೊಡಗೂಡಿಯೇ ಇರುವವು. ಕರ್ಮಗಳನ್ನು ಪ್ರೇರೇಪಿಸುವ ಸೂಕ್ಷ್ಮಗುಣಗಳನ್ನು ಪ್ರಕೃತಿಯ ಹೃದ್ಗೋಲದಲ್ಲಿ ಗುರುತಿಸಬೇಕು. ಈ ಗುರುತು ಇಲ್ಲದಿರುವಲ್ಲಿ ಕರ್ಮವು ಪ್ರಕೃತಿಬಂಧನ. ಇದು ಇದ್ದು ಹಾಗೇ ಬೆಳೆಯುತ್ತಿರುವಲ್ಲಿ ಕರ್ಮವು ಮುಕ್ತಿಸಾಧನ. ಯಾಕಂದರೆ ಈ ಅರಿವು ಬಂಧಿಸುವ ಆಸಕ್ತಿಯನ್ನು

ಧರ್ಮದ ಧಾತು

---

* ಗೀತೆ ೩೭-೨೮

ಹರಿದುಹಾಕುತ್ತದೆ. ಕರ್ಮವೇನೋ ಬಿಟ್ಟದ್ದಲ್ಲವೆಂದು ಹಿಂದೆಯೇ ಹೇಳಿದೆಯಷ್ಟೆ. "ಆದರೆ ಅರ್ಜುನಾ, ಗುಣಕರ್ಮಗಳ ಈ ತಾತ್ವಿಕ ಸಂಬಂಧವನ್ನು ಬಲ್ಲವನು ಇವೆಲ್ಲ ಗುಣಗಳ ಆಟವೆಂದು ತಿಳಿದುಕೊಂಡು ಅವುಗಳಲ್ಲಿ ಆಸಕ್ತನಾಗುವದಿಲ್ಲ." ಪ್ರಕೃತಿಯ ಲೀಲೆಯ ಈ ತಿಳವಳಿಕೆಯು ಬಹು ಪ್ರಾಚೀನ ಕಾಲದಿಂದ ನಮ್ಮಲ್ಲಿತ್ತು. ಈಗ ಪಾಶ್ಚಿಮಾತ್ಯರೂ ಅದನ್ನು ಪ್ರಪಂಚದ ವಿವಿಧ ಜನವಸ್ತು ಪ್ರದೇಶಗಳ ಜ್ಞಾನದಿಂದ ಕಣ್ಣಾರೆ ಕಂಡು ಪರಾಮರಿಸಿ ನೋಡುತ್ತ ವಿವರಿಸುತ್ತ ಬಲಪಡಿಸುತ್ತಿದ್ದಾರೆ.

ಪ್ರಕೃತಿಯ ಗುಹ್ಯಾತಿಗುಹ್ಯ ಗರ್ಭವು ಮಾನವನ ಮನಸ್ಸಿನಲ್ಲಿ ಹೇಗೆ ತನ್ನ ವಿಚಾರಾಚಾರಗಳ ಸಂತಾನವನ್ನು ಹುಟ್ಟಿಸುತ್ತದೆಂಬದನ್ನು ನೋಡುವ. ಅದಕ್ಕೆ ಮಾನವನು ಹೇಗೆ ತನ್ನ ಮುದ್ರಿಕೆಯನ್ನಿಡುತ್ತಾನೆಂದೂ ನೋಡಬಹುದು. ನಾಗರಿಕ ಮನುಷ್ಯನ ಆಕಾಂಕ್ಷೆ ಆವಶ್ಯಕತೆಗಳ ಮೂಲವನ್ನು ಕಂಡುಹಿಡಿಯುವದಕ್ಕೆ ಮನಃಶಾಸ್ತ್ರ ವಿಶಾರದರು ಮಾನವನ ಮನಸ್ಸಿನಲ್ಲಿಯೇ ಮುಣುಗಿ ನೋಡುತ್ತಾರೆ. ಪ್ರಪಂಚದ ಮೂಲೆಯಿಂದ ಮೂಲೆಗೂ ತಿರುಗುವ ಅನುಕೂಲತೆಯು ಈಗ ಹೆಚ್ಚಾಗಿರೋಣದರಿಂದ, ಅವರು ಅನೇಕಾನೇಕ ಮಾನವ ವರ್ಗಗಳನ್ನೂ ನೋಡಿ ತಿಳಿದುಕೊಳ್ಳುತ್ತಾರೆ.

**ಕಟ್ಟುಪಾಟುಗಳು ಮೊದಲೋ? ದೇವಧರ್ಮಗಳು ಮೊದಲೋ?**

ದೇವಧರ್ಮವೆಂಬದನ್ನು ದೇವರು ಮತ್ತು ಆತನ ಪ್ರವಾದಿಗಳು ತಾವೇ ಸಮಾಜಕ್ಕೆ ತೋರಿಸದಿದ್ದರೆ ಸಮಾಜವೇ ಹಾಳಾಗುತ್ತಿತ್ತೆಂದು ಮತಾಭಿಮಾನಿಗಳು ಹೇಳುವದು ಸರ್ವಸಾಧಾರಣವೇ. ಆದರೆ ಅದು ಸರಿಯಲ್ಲ. ಈ ಕಲ್ಪನೆಯು ಮಾನವನ ನಿಸರ್ಗಕ್ಕೇ ನಿಂದೆ. ಆತನೊಳಗೆ ಸದ್ಗುಣ ಸದ್ವಿಚಾರಾಚಾರಗಳಿಗೆ ಎಲ್ಲೆಲ್ಲಿಯೂ ಉತ್ತೇಜನವೇ ಇಲ್ಲವೆಂದೆನ್ನುವ ಕಲ್ಪನೆಯದು. ಮಾನವನಿಗೆ ಶುದ್ಧ ಅವಮಾನವದು. ನಾಗರಿಕತೆಯೇ ಎಂದೂ ಇಣುಕಿ ನೋಡದ ದೂರದಲ್ಲಿ

ರುವ ಕೆಲವು ಸಮಾಜಗಳಲ್ಲಿ **ದೇವಧರ್ಮಶಾಸ್ತ್ರ ಎಂಬ ಶಬ್ದಗಳೇ ಇಲ್ಲ; ಆದರೂ ಇವುಗಳಿಂದಲೇ ಉದ್ಭವಿಸಿದೆಯೆಂದು ಸಾಮಾನ್ಯರು ಭಾವಿಸಿ ಆಚರಣದಲ್ಲಿಟ್ಟುಕೊಂಡ ಕಟ್ಟುಪಾಟುಗಳು ಮಾತ್ರ ಆ ಅನಾಗರಿಕರಲ್ಲಿಯೂ** ಇವೆ. ದೃಷ್ಟಾಂತಕ್ಕೆ, ಮಿಲಾನೀಶಿಯಾ ಎಂಬ ದ್ವೀಪಸಮೂಹದ ಜನಾಂಗದಲ್ಲಿ ಈ ವಿಷಯವನ್ನು ಧಾರಾಳವಾಗಿ ಕಾಣಬಹುದು. ಅವರಲ್ಲಿ ದೇವ-ಧರ್ಮ-ಶಾಸ್ತ್ರ-ಮತ ಇತ್ಯಾದಿಗಳ ಗೊಂದಲವಿಲ್ಲದಿದ್ದರೂ ಅವರ ಅನೇಕ ನೀತಿ ಮತ್ತು ನಡತೆಗಳು ಸರಿಯಾಗಿಯೇ ಇವೆ. ಇದರಿಂದ ನಮಗೇನು ತೋರುತ್ತದೆಂದರೆ **ಸಂಘದಲ್ಲಿ ಕಟ್ಟುಪಾಟುಗಳು ಮೊದಲು ಬಂದಿರಬೇಕು. ದೇವ-ಮತ-ಶಾಸ್ತ್ರಗಳು ಅನಂತರ ಉಂಟಾಗಿರಬೇಕು. ದೇವರೆಂಬ ಕಲ್ಪನೆಯೇ ಇಲ್ಲದೆ ಬದುಕಿರುವ ಸಂಘಗಳೆಷ್ಟೋ ಇವೆ. ಆದರೆ ಈ ಕಟ್ಟುಪಾಟುಗಳಿಲ್ಲದೆ ಮಾತ್ರ ಬದುಕಿರುವ ಸಂಘವು ಎಲ್ಲೆಲ್ಲಿಯೂ ಇಲ್ಲ.**

ದೇವ-ಧರ್ಮ-ಮತಗಳು ಈ ಅಗತ್ಯ ಅನಿವಾರ್ಯ ವಿಚಾರಾಚಾರ ಸರೋವರದಿಂದ ಮೇಲಕ್ಕೆ ಹಾರಿದ ಉಗೆಯು. ಸ್ವಲ್ಪ ನಾಗರಿಕನಾದ ಮನುಷ್ಯನ ಬುದ್ಧಿಯ ಶಕೆಯಿಂದುಂಟಾಗಿ ಆಕಾಶಕ್ಕೇರಿದ ಬಾಷ್ಪವು. **ಪ್ರಾಚೀನ ಧರ್ಮವು ಮಾನವನ ಭೀತಿ ಮತ್ತು ಅಹಂಕಾರಗಳ ಸಂತತಿ.** ಪ್ರಕೃತಿಯು ಯಾವಾಗಲೂ ಅನುಕೂಲವೇ ಆಗಿರುವ ಶಕ್ತಿಯಲ್ಲ. ಅದಕ್ಕೊಮ್ಮೊಮ್ಮೆ ಭಯಂಕರ ರುದ್ರಾವೇಶ ಬಂದು ಸೃಷ್ಟಿಯನ್ನು ಒಂದೇ ಉಸುರಿನಿಂದ ಹಾರಿಸುವದೂ ಉಂಟು. ಆಗಿನ ಭೀಕರ ಉತ್ಪಾತ ಉಪದ್ರವಗಳು ಜೀವರಾಶಿಗಳಿಗೆ ಸಹಿಸಲಸಾಧ್ಯ. ಸದ್ದಿಲ್ಲದೆ ಬಂದ ಆ ಸಂಕಟಗಳಿಗೆ ಬಲಿಯಾಗಲೇ ಬೇಕಾಗುತ್ತದೆ. ಪ್ರಾಚೀನ ಮನುಷ್ಯನಿಗೆ ಅವನ್ನು ನಿರ್ಬಂಧಿಸುವ ಶಕ್ತಿಯು ಇದ್ದಿಲ್ಲವಾದರೂ, ಆತನ ಮನಸ್ಸೇನೋ ಸುಮ್ಮನಿರದೆ ಹೋದುದು ಸಹಜವೇ. ಅವನು **ಪ್ರಕೃತಿಯ ಭೀಕರ ಶಕ್ತಿಗಳಿಗೆ ನಾಮಕರಣವನ್ನು ಮಾಡಿ ದೇವದೇವತೆಗಳನ್ನು ನಿರ್ಮಿಸಿದನು. ಆ ತನ್ನ ಊಹೆಯಿಂದುದ್ಭವಿಸಿದ ದೇವತೆಗಳಿಗೆ ಶಾಂತಿಸಮಾಧಾನಗಳನ್ನು ಕಲ್ಪಿಸಿದನು.** ಅಷ್ಟೇ ಅಲ್ಲ. ಜಗತ್ತಿನಲ್ಲಿ ಎಷ್ಟೋ ಜೀವ

ರಾಶಿಗಳು. ಅವುಗಳಲ್ಲಿವನೊಬ್ಬನು! ಅವುಗಳಿಗೆ ಇಲ್ಲದ ಆತ್ಮಪ್ರಜ್ಞೆ* ಯೊಂದು ಇವನಿಗೆ ವಿಶೇಷ. ಇವನಿಗೆ ಅಹಂಕಾರವು ಬಿಟ್ಟದ್ದಲ್ಲ. ಆದರೆ ಪ್ರಕೃತಿಗೆ ಇವನೂ ಇತರ ಜೀವರಾಶಿಗಳಂತೆ ಅಧೀನನೇ. ಪ್ರಕೃತಿಯ ಉಪೇಕ್ಷೆಯು ಇವನಿಗೆ ಅಸಹ್ಯವಾಗಿ ತೋರುವದು ಸಹಜವೇ. ಆದರೆ ಇವನ ಅಹಂಕಾರವು ಸುಮ್ಮನಿದ್ದೀತೋ? ಆ ಅಹಂಕಾರದಿಂದ ಹುರಿಗೊಂಡು ಇವನು ತನ್ನ ದೊಡ್ಡಸ್ತಿಕೆಯ ಸಾಮುಗ್ರಿಗಳನ್ನು ಕಲ್ಪಿಸಿಬಿಟ್ಟನು. ತನಗೂ ತನ್ನ ಪಂಗಡಕ್ಕೂ ಪ್ರಾಂತಕ್ಕೂ ಅಭಿಮಾನದಿಂದ ಕಾಪಾಡುತ್ತಿರುವ ಭೀಕರ ಶಕ್ತಿವ್ಯಕ್ತಿಯೊಬ್ಬನು ಕಣ್ಣಿಗೆ ಬೀಳದೆ ಕುಳಿತಿದ್ದಾನೆಂಬ ಕಲ್ಪನೆಯನ್ನೆಬ್ಬಿಸಿದನು. ಆತನಿಗೆ ನಾಮರೂಪ ಗುಣವರ್ಣಗಳನ್ನು ಕಲ್ಪಿಸಿದನು. ಆತನನ್ನು ಮನ್ನಿಸದವರು ನಾಶಗೊಳ್ಳುವರೆಂಬ ಭಾವನೆಯನ್ನು ಹಬ್ಬಿಸಿದನು. ಆತನನ್ನು ಒಲಿಸುವ ರೀತಿಗಳನ್ನುಂಟುಮಾಡಿದನು. ಆತನಿಗೆ ಸಮ್ಮತವಾದ ಗುಣಭಾವ ವಿಚಾರ ಆಚಾರಗಳನ್ನೂ ಆತನಿಗೆ ಅಸಮ್ಮತವಾಗಿರುವವನ್ನೂ ವಿವರಿಸಿದನು. ಹೀಗೆ ಮುಂಚೆ ಒಬ್ಬ ದೇವನನ್ನು

ಅಹಂಕಾರ

ಹುಟ್ಟಿಸಿದನು. ಜನಾಂಗದ ವಿಚಾರಗಳು ಬೆಳೆದಂತೆ ಈ ದೇವನೂ ಬದಲುಗೊಳ್ಳುತ್ತ ಹೋಗಿರುತ್ತಾನೆ. ಈಗಿನ ದೇವನ ಗುಣಶಕ್ತಿವರ್ಣನಗಳಿಗೂ ಮೊದಲನೆಯವುಗಳಿಗೂ ಎಷ್ಟೋ ವ್ಯತ್ಯಾಸವಿದೆ! ನಾಗರಿಕತೆಯು ಬೆಳೆದಂತೆ ಜನಾಂಗದ ದೇವನೂ ಬೆಳೆದಿರುವನು. ಪ್ರಾಚೀನ ದೇವರಿಗೂ ಈಗಿನ ದೇವರಿಗೂ ಸಂಬಂಧವೇ ಇಲ್ಲದಂತೆ ತೋರುತ್ತದೆ. ದೇವರ ಈ ಪ್ರಗತಿಯು ಮುಂದೆ ವಿವರಿಸಲ್ಪಡುವದು. ವಿವೇಕ ಪರೀಕ್ಷಣಗಳಿಂದ ತಿಳಿದ ದೇವರು ಜ್ಞಾನರಾಜ್ಯದ ಚಕ್ರವರ್ತಿ. ಇದು ಮಾನವ ಚಿತ್ತದಲ್ಲಿ ಮೊದಲಾದ ಆತನ

---

* ಎಲ್ಲ ಪ್ರಾಣಿಗಳಿಗೂ ಪ್ರಜ್ಞೆ ಇದೆ. ಅವುಗಳ ಇಂದ್ರಿಯಗಳಿಗೆ ಹೊರಗಿನ ಪ್ರಪಂಚದ ತಿಳವಳಿಕೆ [ಸಂವಿತ್ತಿ] ಇದೆ. ಆದರೆ ಮಾನವನಿಗೆ ವಿಶೇಷವಾದ ಪ್ರಜ್ಞೆಯಿದೆ. ಆತನು ಹೊರಗಿನ ವ್ಯಾಪಾರಗಳನ್ನೇ ನಿಲ್ಲಿಸಿ ಮನಸ್ಸಿನ ಒಳಗಿನ ವೃತ್ತಿಗಳನ್ನು ಮಾತ್ರ ನೋಡಬಲ್ಲ, ಅವುಗಳಲ್ಲಿ ರಮಿಸಬಲ್ಲ, ದುಃಖಿಸಬಲ್ಲ, ಅವುಗಳನ್ನು ಬೆಳಿಸಬಲ್ಲ, ಅಳಿಸಬಲ್ಲ. ಈ ಯೋಗ್ಯತೆಯೇ ಆತ್ಮಪ್ರಜ್ಞೆಯ ಗುರುತು. (Self consciousness)

ಹುಟ್ಟು. ಈಗಿನವನನ್ನರಿಯುವದಕ್ಕೆ ಬರಿಸು ಮನಃಶಾಸ್ತ್ರ ಮಾನವ ಜಾತಿಶಾಸ್ತ್ರಗಳು ಸಾಲವು. ನ್ಯಾಯವಿವೇಕಗಳೂ ಬೇಕು.

**ಧರ್ಮದ ಅತಿಪುರಾತನ ಮೂಲವು ಮನುಷ್ಯನ ಭಯ- ಶಂಕಾ- ಆಕ್ಷೇಮ- ಏಕಾಕಿತಾ- ಅಸಹಾಯತೆಗಳ ಭಾವದಲ್ಲಿದೆ. ಸಂವೇದನೆಯಲ್ಲಿದೆ.** ಧರ್ಮದ ಸುಪ್ತಭೂಮಿಕೆಯು ಇಲ್ಲಿದೆ. ಇತರ ಪ್ರಾಣಿಗಳಂತೆಯೇ ಮನುಷ್ಯನೂ ಒಂದು ಪ್ರಾಣಿ. ಆತನಿಗೂ ಜೀವನ ಸಂಗ್ರಾಮವು ಬಿಟ್ಟದ್ದಲ್ಲ. ಬದುಕಿರಬೇಕಾದರೆ ಆತನು ಎಷ್ಟೋ ವಿರುದ್ಧವಾತಾವರಣಗಳನ್ನೂ ಜೀವಿಗಳನ್ನೂ ಇದಿರಿಸ ಬೇಕು. ಹುಟ್ಟುಸಾವುಗಳೆರಡೂ ಅವನಿಗೆ ಬಿಟ್ಟವಲ್ಲ. ಹುಟ್ಟಿದು ದರ ಸುದ್ದಿ ಅವನಿಗಿಲ್ಲ. ಅದರ ಜವಾಬ್ದಾರಿಯೂ ಆತನ ಮೇಲಿಲ್ಲ. ಬದುಕು ಅವನಿಗೆ ಬಹುಪ್ರಿಯ. ಸಾವು ಆತನಿಗೆ ಬಿಟ್ಟದ್ದಲ್ಲ. ಅನಾ ಗರಿಕ ಪ್ರಪಂಚದಲ್ಲಿ ಅದು ಹೆಜ್ಜೆಹೆಜ್ಜೆಗೂ ತನ್ನ ಕ್ರೋಧಾವೇಶದ ಕೆಂಗಣ್ಣುಗಳನ್ನು ಬಿಚ್ಚಿ ಬೆದರಿಸುತ್ತದೆ. ತನಗೆ ಪ್ರಿಯವಾದ ಬದುಕು ಒಮ್ಮೆ ಸಮಾಪ್ತವಾಗಲೇ ಬೇಕು. ಪ್ರಿಯವಾದ ಜೀವನಕ್ಕೆ ಅಪ್ರಿ ಯವಾದ ಪರಿಸ್ಥಿತಿಯೇ ಎಲ್ಲೆಲ್ಲಿಯೂ. ಬದುಕಬೇಕಾದರೆ ಕಾದಾಡ ಬೇಕು. ಆದರೆ ಕಾದಾಡುವದು ಪ್ರಿಯವಲ್ಲ. ಈ ಪ್ರಿಯಾಪ್ರಿಯ ಗಳ ಕಾಮಕ್ರೋಧತರಂಗಗಳ ಮೇಲೆ ತೇಲಿ ಮುಣುಗುವ ಚೈತ ನ್ಯದ ಒಂದು ಬರಿಯ ಚುಕ್ಕೆ ಅಲ್ಲವೆ ಮಾನವನೆಂದರೆ? ಜೀವಿತದ ಅರ್ಥ ಆತನಿಗೆ ತಿಳಿಯುವದಿಲ್ಲ. ಆದರೆ ವಿಚಾರವು ಅತಿ ಸ್ವಲ್ಪವೇ ಆಗಿದ್ದರೂ ಅದೇನೋ ಆತನ ಪ್ರಕೃತಿಯಲ್ಲಿದ್ದೇ ಇದೆ. ವಿಚಾರ ಗ್ರಹದ ಹಸುಗೂಸು ಪಾಪ ಇವನು. ಆ ತನ್ನ ಚಿಕ್ಕಪುಟ್ಟ ವಿಚಾರ

**ಅಸಹಾಯತೆಯ ಆಟ**

ಸುಖದುಃಖಾದಿ ದ್ವಂದ್ವಗಳಿಂದ ಹೊಡೆಯಲ್ಪ ಡುವ ಜೀವಿತದ ಒಂದೊಂದು ಅನುಭವವೂ ಒಂದೊಂದು ಪ್ರಶ್ನೆಯೇ. ಅಷ್ಟೇ ಏಕೆ- ಜಗತ್ತೆಲ್ಲವೂ ಜೀವಿಗೆ ಒಂದು ದೊಡ್ಡ ಪ್ರಶ್ನಾರ್ಥಕ ಚಿನ್ಹ. ಆದರೆ ಇವನ ಚಿಕ್ಕ ವಿಚಾ ರಕ್ಕೆ ಅದನ್ನು ಬಿಡಿಸುವ ಶಕ್ತಿಯಿದೆಯೋ? ಇಲ್ಲ. ಆದರೂ ವಿಚಾ ರವೂ ಏನಾದರೊಂದು ಉತ್ತರವನ್ನು ಕೊಡದೆ ಸುಮ್ಮನಿರುವದಿಲ್ಲ.

ಅಹಂಕಾರವು ಪರಿಸ್ಥಿತಿಯ ನಿಂದೆಯನ್ನೂ ಪರಿಸ್ಥಿತಿಯ ವಿಚಾರಕ್ಕೆ ಆರೋಪಿಸಿದ ಷಂಢತ್ವವನ್ನೂ ಸುಮ್ಮನೆ ಸಹಿಸುವದೋ? ಇಲ್ಲ. ಅದಕ್ಕೆ ತನ್ನ ಚಿಕ್ಕತನವು ಗೊತ್ತು. ಆದರೂ ಅಹಂಕಾರಕ್ಕೆ ಈ ಸಂವೇದನೆಯನ್ನು ಸಹಿಸಲಿಕ್ಕಾಗದು. ಮನಸ್ಸಿಗೆ ಸಮಾಧಾನವು ಬೇಕು. ಅದಕ್ಕಾಗಿ ಅದೊಂದು ಅಗೋಚರ ಶಕ್ತಿಯನ್ನು ಕಲ್ಪಿಸಿತು. **ವ್ಯಕ್ತಿಸಂಘಗಳಿಗೆ ಪೂಜ್ಯವಾದ ಆವಶ್ಯಕವಾದ ಸಕಲ ಶಕ್ತಿಗಳನ್ನು ಮಿತಿಮೀರಿ ಆ ದೇವರಲ್ಲಿ ಕಲ್ಪನೆಯು ರಚಿಸಿಬಿಟ್ಟಿತು.** ಅಂಥ ದೇವರಿಗೆ ತಾವು ಪ್ರಿಯರು ಎಂಬ ಭಾವನೆಯಿಂದ ಅಹಂಕಾರಕ್ಕೆ ಸಮಾಧಾನ. ಚಿಕ್ಕವನು ತನ್ನ ದೊಡ್ಡಸ್ತಿಕೆಯನ್ನು ವರ್ಣಿಸುವಾಗ ತಾನು ಕಂಡ, ತಾನು ಅರಿತ ಯಾರ್ಯಾರೋ ದೊಡ್ಡ ಮನುಷ್ಯರ ಹೆಸರನ್ನು ಆಧಾರವಾಗಿಟ್ಟುಕೊಳ್ಳುವದಿಲ್ಲವೆ? ನಮ್ಮ ಗೋತ್ರ ಇಂಥಾದ್ದು, ನಮ್ಮ ಮನೆತನ ಅಂಥಾದ್ದು, ಎಂದು ಬೂಟಾಟಿಕೆ ಕೊಚ್ಚುತ್ತ ತಾವೂ ದೊಡ್ಡವರೆಂದು ಗಿಲಿಕೆ ಬಾರಿಸುವವರು ಎಷ್ಟು ಮಂದಿಯಿಲ್ಲ? 'ಅವರು ಹಾಗಿದ್ದರೂ ಇರಬಹುದು. ನೀವು ಹೋಗಿದ್ದೀರಿ' ಎಂದು ಕೇಳಿದರೆ ಅದಕ್ಕೆ ಮತ್ತದೇ ಉತ್ತರ! **ದೊಡ್ಡ ಬಲಾಢ್ಯ ದೇವರಿಗೆ ತಾವು ಬೇಕಾದವರು, ಅದಕ್ಕಾಗಿ ತಾವೂ ದೊಡ್ಡವರೇ!** ಪ್ರಕೃತಿಯು ಯಾವ ಜೀವಿಗೂ ವಿಶೇಷವಾಗಿ ಲೆಕ್ಕಿಸುವದಿಲ್ಲ. ಹಾಗಾದರೆ ಮನುಷ್ಯನೂ ಇತರ ಜೀವರಾಶಿಗಳಿಗೆ ಸಮಾನನೋ? ಇದರ ಆಲೋಚನೆಯು ಸಹ ಆತನಿಗೆ ಅಸಹ್ಯ! ಅದಕ್ಕಾಗಿ ಆತನ ಅಹಂಕಾರವು ಹೀಗೆಂದಿತು:– ಮಾನವನು ಎಲ್ಲ ಜೀವ

**ಸ್ವನಿರ್ಮಿತ ಶ್ರೇಷ್ಠತೆ**

ರಾಶಿಗಳಲ್ಲಿ ಶ್ರೇಷ್ಠನು. ಇದನ್ನೆಂದವರಾರು? ದೇವರು. ಆ ದೇವರು ಆತನನ್ನು ತನ್ನ ರೂಪದಲ್ಲಿಯೇ ಉಂಟುಮಾಡಿದ್ದಾನೆ.* ಆತನಿಗಾಗಿ ಸಕಲಸೃಷ್ಟಿಯನ್ನು ಉಂಟುಮಾಡಿದ್ದಾನೆ.§ ಅದರಲ್ಲಿರುವ ಗಾಳಿ ನೀರು ಕಲ್ಲು ಮಣ್ಣುಗಳ ಮೊದಲುಗೊಂಡು ಪಶುಪಕ್ಷಿಗಳವರೆಗೆಲ್ಲವೂ ತನಗಾಗಿಯೇ

---

* ಬೈಬಲ್ ಜನಿಸಿಸ್ ೧-೨೬ ಕುರಾನ ೩-೫೮ ಇಂಥ ಎಷ್ಟೋ ಆಧಾರಗಳಿವೆ.

§ ,, ,, ೨೮-೩೧ ,, ೨ ೨೯-೩೦ ,,

ಉಂಟುಮಾಡಲ್ಪಟ್ಟವೆ, ಎಂದಾತನ ಧರ್ಮದ ತೀರ್ಮಾನ. ಹಣ್ಣು ಹಂಪಲು ಕುರಿದನ ಮುಂತಾದವುಗಳು ಅವನ ತಿಂಡಿಗಾಗಿ; ಇರುವೆ, ಜೇನುನೊಣ, ನಾಯಿ ಮುಂತಾದ ಕೆಲವು ಜೀವಿಗಳು ಆತನಿಗೆ ನೀತಿಯನ್ನು ಕಲಿಸುವದಕ್ಕಾಗಿ ಹುಟ್ಟವೆ, ಎಂದವನ ಮತ. ಇರುವೆಯು ಸಾಹಸವನ್ನು ಕಲಿಸುವದಕ್ಕಾಗಿ, ಜೇನು ನೊಣವು ತನ್ನ ಕಾಲನ್ನೆಂದೂ ಸಿಕ್ಕಿಸಿಕೊಳ್ಳದೆಯೇ ಜೀವನಪುಷ್ಪದ ಸಾರವನ್ನು ಹೀರುವ ಅಲಿಪ್ತ ಸಾಧನೆಯನ್ನು ತೋರಿಸುವದಕ್ಕಾಗಿ, ಭ್ರಮರವು ಕೀಟಕದ ಪ್ರಗತಿಯನ್ನು ತೋರಿಸಿ ಧ್ಯಾನದ ಅಪಾರ ಪರಿವರ್ತನ ಶಕ್ತಿಯನ್ನು ಸಾಧುಗೊಳಿಸುವದಕ್ಕಾಗಿ, ನಾಯಿಯು ಕೃತಜ್ಞತೆಯ ಮೇಲ್ಪಂಕ್ತಿಯನ್ನು ಹಾಕುವದಕ್ಕಾಗಿ, ಕತ್ತೆಯು ತನ್ನ ಸದ್ದಿಲ್ಲದ ಸಹನ ಸೇವಾಗುಣಗಳನ್ನು ಕಲಿಸುವದಕ್ಕಾಗಿ– ಅಂತೂ ಇಂತೂ ಜಗತ್ತೆಲ್ಲವೂ ಈ ಕಪೋಲಕಲ್ಪಿತ ವಿಶೇಷಜೀವಿಯ ಉಪಕಾರಕ್ಕಾಗಿಯೇ! ಪ್ರಾಚೀನ ಮಾನವನ ದೇವಧರ್ಮಗಳ ತೀರ್ಮಾನ ಹೀಗಿದೆ! **ಈ ಕಲ್ಪನೆಯು, ಪ್ರಕೃತಿಯು ಆತನಿಗೆ ತಿರಸ್ಕರಿಸಿದ ವಿಶೇಷತೆಯನ್ನು ಕೊಟ್ಟು ಆತನ ಅಹಂಕಾರಕ್ಕೆ ನೀರು ಗೊಬ್ಬರ ಹಾಕಿ ಆತನನ್ನು ಹಿಗ್ಗಿಸುತ್ತದೋ ಇಲ್ಲವೋ?** ಆತನ ದೇವನು ಆತನಿಗೆ ಈ ರೀತಿ ಸಮಾಧಾನವನ್ನು ಕೊಡುತ್ತಾನೆ. ಆತನ ತಂಡಕ್ಕೆ ಅನ್ನ ಬಟ್ಟೆ ಸುಖಸಂಪತ್ತಿಗಳನ್ನು ಕೊಡುತ್ತಾನೆ. ನೀತಿ ಅನೀತಿಗಳನ್ನು ಅವರಿಗೇ ಹೇಳಿಕೊಡುತ್ತಾನೆ. ಯುದ್ಧಗಳಲ್ಲಿ ಬೆಂಬಲವಾಗಿರುತ್ತಾನೆ. ಒಮ್ಮೊಮ್ಮೆ ತಾನೇ ಯುದ್ಧಕ್ಕಾಗಿ ತನ್ನ ಭಕ್ತರನ್ನು ಹುರಿಗೊಳಿಸುತ್ತಾನೆ. * ತನ್ನ

---

* ಕುರಾನ್ ೧೬–೮೧ „ದೇವರು ನಿಮ್ಮನ್ನು ಯುದ್ಧದಲ್ಲಿ ಕಾಪಾಡುವದಕ್ಕಾಗಿ ಕವಚಗಳನ್ನು ಕೊಟ್ಟಿದ್ದಾನೆ”

„ ೨೧–೨೫ „ಅಲ್ಲಾನು ನಾಸ್ತಿಕರನ್ನು ಅಟ್ಟಬಿಟ್ಟನು......ಅವರಿಗೆ ಅನುಕೂಲತೆಯೂ ದೊರೆಯುಲಿಲ್ಲ, ಮತ್ತು ತನ್ನನ್ನು ನಂಬಿದವರನ್ನು ಕಾಪಾಡಿದನು.

ಬೈಬಲ್ ಎಗ್ಸೋಡಸ್ ೧೨. ೨೩–೨೯ ಇಜಿಪ್ತದ ಚೊಚ್ಚಲುಮಕ್ಕಳ ಸಂಹಾರವನ್ನು ಓದಿ

ಕುರಾನ ೨. ೪೬–೫೧ ಮತ್ತು ಎಗ್ಸೋಡಸ್ ೧೫. ೧೫–೨೫ ನಂಬಿದವರನ್ನು ಕಾಪಾಡುವದಕ್ಕಾಗಿ ಇಜಿಪ್ತದ ಜನಾಂಗವನ್ನು ದೇವರು ಕೆಂಪುಸಮುದ್ರದಲ್ಲಿ ಮುಣುಗಿಸಿದ ವಿಷಯವನ್ನೋದಿ.

ಭಕ್ತರ ವೈರಿಗಳನ್ನು ನಾಶಗೊಳಿಸುತ್ತಾನೆ. ತನಗೆ ಪ್ರಿಯವಾಗಿರುವ ಇಷ್ಟು ಕೆಲಸಗಳನ್ನು ಒಣ ಒಂದು ನಂಬಿಕೆಗಾಗಿ ಮಾತ್ರ ಹೆಚ್ಚಿನ ವೆಚ್ಚವಿಲ್ಲದೆ ಮಾಡಿಕೊಡುವ ಅನುಕೂಲ ದೇವರು ಸೃಷ್ಟಿಯಲ್ಲಿ ಲೆಕ್ಕಕ್ಕೆ ಬಾರದ ಅಹಂಕಾರಯುಕ್ತ ಮಾನವನ ಮನಸ್ಸಿಗೆ ಬೇಕಾದ ಸಮಾಧಾನವನ್ನು ಕೊಡದಿರುವನೋ? ಆತನಿಗೆ ಪೂಜ್ಯನಾಗದಿರುವನೋ? ಇಷ್ಟು ಅಗ್ಗವಾಗಿರುವ ದೇವರನ್ನು ಯಾರು ಬಿಟ್ಟು ಹಾಕಿಯಾರು?

ಇಷ್ಟಾದರೂ ಈ ಪ್ರಪಂಚದಲ್ಲಿ ಮಾನವನಿಗೆ ಎಡೆಬಿಡದ ಸುಖವಿಲ್ಲ. ಈತನ ಪಂಗಡದ ನೀತಿರೀತಿಗಳಿಗೂ ಇನ್ನೊಂದು ಪಂಗಡದವುಗಳಿಗೂ (ಅವನ್ನು ಹೇಳಿಕೊಟ್ಟ ದೇವನು ಒಬ್ಬನೆಯಾದರೂ) ವ್ಯತ್ಯಾಸವಿದೆ. ವಿರೋಧವಿದೆ. ಈ ವಿರೋಧದಿಂದಲೂ ಇತರ ಅನೇಕ ಪ್ರಕೃತಿ ವಿಕಾರಗಳಿಂದಲೂ ಈತನಿಗೆ ಸಂಕಟಗಳೇನೂ ಬಿಟ್ಟವೇ ಅಲ್ಲ. ಸಂಕಟಗಳ ಸಮಾಧಾನಕ್ಕಾಗಿಯೇ ದೇವರು ಮತ್ತು ಧರ್ಮ. ಹೀಗಿರುವಾಗ ತನ್ನ ದೇವಧರ್ಮಗಳ ಹಾದಿಯನ್ನು ಹಿಡಿದ ಮೇಲಕ್ಕೂ ಸಂಕಟಗಳು ಬರಬೇಕೇ? ತನ್ನ ದೈವಭಕ್ತಿಯಲ್ಲಿ ಕೊರತೆಯಿದೆಯೋ ಅಥವಾ ಆ ದೇವಧರ್ಮಗಳಲ್ಲಿಯೇ ಲೋಪವಿದೆಯೋ? ಎಂಬ

**ಇಹದಲ್ಲಿ ಪಾಪಪುಣ್ಯಗಳ ಫಲ.**

ಸಂದೇಹ ಹುಟ್ಟುವದು ಸಹಜವದೆ. ಅದಕ್ಕೊಂದು ಸಮಾಧಾನವು ಬೇಕಲ್ಲವೆ? ಅದಕ್ಕಾಗಿ ಮತಗಳು ಹೀಗೆಂದು ತೀರ್ಮಾನಿಸಿವೆ. **ಒಳ್ಳೆಯವರಿಗೆ ಇಲ್ಲಿ ಸಂಕಟಗಳು, ಕೆಟ್ಟವರಿಗೆ ಸುಖಸೌಭಾಗ್ಯಗಳು ಇರುವದು ಒಂದು ದೇವರ ಆಟ.** ಸಂಕಟಗಳನ್ನು ಆತನು ಪರೀಕ್ಷೆಗಾಗಿ ಕಳಿಸುತ್ತಾನೆ; ದುಷ್ಟರಿಗೆ ಸುಖವನ್ನು ಅವರ ವಿನಾಶಕ್ಕಾಗಿ ಕೊಡುತ್ತಾನೆ. § ಒಳ್ಳೆಯವರು ತನ್ನನ್ನು ಸ್ಮರಿಸುವಂತೆ ಎಚ್ಚರಗೊಳಿಸಲಿಕ್ಕಾಗಿ ಅವರಿಗೆ ದುಃಖ ಕಳಿಸುತ್ತಾನೆ; ಕೆಟ್ಟವರಿಗೆ ತನ್ನ ಮರವನ್ನುಂಟುಮಾಡುತ್ತಾನೆ. ಒಳ್ಳೆಯವರನ್ನು

§ ಸೆಂಟಲೂಕ ೬. ೨೦–೨೬ (ಅ. ಸಾ.) ಸುಖಕೇ ಮಾಥಾ ಸುಖದ ತಲೆಯೋ ಶಿಲಾ.

ಸಂಕಟಗಳ ಲಗಾಮಿನಿಂದ ಬಿಗಿದೆಳೆದು ತನ್ನ ಚರಣಧ್ಯಾನದಲ್ಲಿಡುತ್ತಾನೆ; ಕೆಟ್ಟವರಿಗೆ ಕತ್ತಿನ ಹಗ್ಗವನ್ನು ಉದ್ದವಾಗಿ ಸಡಿಲು ಬಿಡುತ್ತಾನೆ. ಇದು ಆವನ ಲೀಲೆ! ಆದರೆ ಲೀಲೆಯೆಂದೊಡನೆಯೇ ಸಂದೇಹನಿವೃತ್ತಿಯಾಗುವದಿಲ್ಲವಲ್ಲ! ಸಂದೇಹಗಳು ಮಾನವನ ಜನ್ಮಸಿದ್ಧ ಹಕ್ಕೇ ಆಗಿರುವವು. ಇದಕ್ಕೆ ಸಮಾಧಾನವು ಬೇಕು. ಅದಕ್ಕಾಗಿಯೇ ಸ್ವರ್ಗನರಕಗಳ ಕಲ್ಪನೆಯು ಹುಟ್ಟಿತು.

ಅವು ಯಾವ ರೀತಿಯಿಂದ ಸಮಾಧಾನವನ್ನು ಕೊಡುತ್ತವೆಂದು ನೋಡುವ. ಒಳ್ಳೆಯವರಾರು? ದೇವರ ಧರ್ಮವನ್ನನುಸರಿಸುವವರು. ಅವರಿಗಿಲ್ಲಿ ದುಃಖವೇನೋ ಪರೀಕ್ಷೆಗೆ ಬಂದೇ ತೀರಬೇಕೆಂದಂತಾಯಿತು. ನ್ಯಾಯವೆಲ್ಲಿದೆ ದೇವರಲ್ಲಿ ಮತ್ತೆ? ಇದೆ; ಯಾಕೆಂದರೆ ಇಲ್ಲಿ

**ಅನಿವಾರ್ಯ ಸ್ವರ್ಗನರಕಗಳು ಮತ್ತು ದೇವರು.**

ದುಃಖದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರಿಗೆ ಶಾಶ್ವತ ಸುಖಭೋಗಗಳನ್ನು ಕೊಡುವದಕ್ಕಾಗಿ ಆತನು ಒಂದು ಲೋಕವನ್ನೇ ನಿರ್ಮಿಸಿರುತ್ತಾನೆ. ಅದು ಸ್ವರ್ಗ. ಕೆಟ್ಟವರಿಗಿಲ್ಲಿ ತನ್ನನ್ನು ಮರೆಸುವದಕ್ಕಾಗಿ ಆತನು ಸುಖವನ್ನೇ ಕೊಡುತ್ತಾನಲ್ಲವೆ? ಅಲ್ಲ, ಅದೂ ಅನ್ಯಾಯವಲ್ಲ. ಯಾಕೆಂದರೆ ಅವರಿಗೆ ನಿರತವೂ ದುಃಖದಲ್ಲಿ ಮುಣುಗಿಸಿಬಿಡುವದಕ್ಕಾಗಿ ಆತನೊಂದು ನರಕವನ್ನೂ ಮಾಡಿರುತ್ತಾನೆ. ಈ ಸ್ವರ್ಗನರಕಗಳಿಗೆ ಅರ್ಹರು ಯಾರು ಎಂದು ನೋಡುವದಕ್ಕಾಗಿ ನಿರೀಕ್ಷಕರು ಬೇಕು. ಪರೀಕ್ಷಕರು ಬೇಕು. ಗೂಢಚಾರರು ಬೇಕು. ಅದಕ್ಕಾಗಿ ಪ್ರತಿಯೊಂದು ಮತವೂ ತಕ್ಕ ಏರ್ಪಾಡನ್ನು ಮಾಡಿದೆ. ಕೆಲವು ಮತಗಳಲ್ಲಂತೂ ಜನರ ಪಾಪಪುಣ್ಯಗಳ ಲೆಕ್ಕಾಚಾರವನ್ನು ಎವೆಯಿಕ್ಕದೆ ನೋಡಿ ಬರೆದಿಡುವವರ ಸಂಸ್ಥೆಗಳೇ ಇವೆ! ಮತ್ತಿವರನ್ನೂ ಅವಲೋಕಿಸಿ ಹತೋಟಿಯಲ್ಲಿಟ್ಟುಕೊಂಡು ಇರಲಿಕ್ಕೊಬ್ಬ ಗುಪ್ತಪುರುಷನು ಬೇಕಲ್ಲವೆ? ಅದಕ್ಕಾಗಿ ದೇವರು ತಾನೇ ಹುಟ್ಟಿ ಮೇಲೆ ಆಕಾಶದಲ್ಲಿಯೇ ಕುಳಿತುಬಿಟ್ಟನು. ಆ ಎತ್ತರದಿಂದ ಇಹವು ಕಾಣದೇ ಹೋದೀತೇ? ಅವನಿಗೆ ನಿದ್ದೆಯೇ ಇಲ್ಲ. ಆದುದರಿಂದ ಆತನನ್ನು ಮರೆಯಲ್ಲಿಟ್ಟು ಯಾವ ಪಾಪಗಳನ್ನು

ಮಾಡಲಿಕ್ಕೂ ಆಗದು. ಮುಂದೆ, ಪಾಪಪುಣ್ಯಗಳು ಕರ್ಮಮಾತ್ರದಲ್ಲಿಯೇ ಇಲ್ಲ, ಮನಸ್ಸಿನಲ್ಲಿಯೇ ಇವು ವೃತ್ತಿರೂಪ ವಿಚಾರದಿಂದಲೂ ಇರಬಹುದೆಂಬ ಜಾಗೃತಿಯು ಮಾನವನಿಗುಂಟಾಯಿತು. ಆಗ ದೇವರು ಅಂತರ್ಯಾಮಿಯಾದನು. ಒಳಹೊರಗಣ ವಿಷಯವ್ಯಾಪಾರಗಳನ್ನೂ ತಿಳಕೊಳ್ಳುವವನಾದನು. ಈಗ ಹೇಳಿ. ಈ ದೇವರು ಮಾನವನ ಭಯ-ಅಸಹಾಯತೆ-ಅಹಂಕಾರಗಳ ಸೃಷ್ಟಿಯು ಅಹುದೋ ಅಲ್ಲವೋ? ಆತನು ನಮ್ಮ ಚಿಂತೆಯನ್ನು ತೆಗೆದು ಸಂತೈಸುತ್ತಾನೆ, ಭಯವನ್ನು ನಿವಾರಿಸುತ್ತಾನೆ, ಸುಖವನ್ನು ನಮಗಾಗಿ ಉಂಟುಮಾಡುತ್ತಾನೆ, ಮತ್ತು ನಾವು ಸಾಮಾನ್ಯರಲ್ಲ, ಸೃಷ್ಟಿಗೆಲ್ಲ ಹಿರಿಯರು ಎಂಬ ಗರ್ವದ ಭಾವನೆಗೆ ಬೆಂಬಲವಾಗಿಯೂ ಇದ್ದಾನೆ. ಅಂಥ **ದೇವರು ಭಯ ಅಹಂಕಾರಗಳಿರುವವರೆಗೆ ಜನಸಮುದಾಯವನ್ನು ಬಿಟ್ಟುಹೋದಾನೋ?**

ಆ ಸ್ವರ್ಗನರಕದ ಸುಖದುಃಖಗಳೂ ಹೇಗಿವೆ ಮತ್ತೆ? ಸರ್ವೋತ್ಕೃಷ್ಟವಾದ ಖಾನಪಾನಗಳು ಆ ಸ್ವರ್ಗದಲ್ಲಿ! ಕ್ರೀಡೆಗಾಗಿ ರಂಭಾ ಮೇನಕಾ ಇತ್ಯಾದಿಗಳು. ಇಲ್ಲಿಗಲ್ಲಿಗೂ ವ್ಯತ್ಯಾಸವೇನೆಂದರೆ ಇಲ್ಲಿಯ ಆಹಾರ–ನಿದ್ರಾ–ಭಯ–ಮೈಥುನ ಇತ್ಯಾದಿಗಳು ಅಲ್ಲಿ ಇಲ್ಲಿಗಿಂತಲೂ ಅತಿಶಯವಾಗಿವೆ. ನರಕವನ್ನು ನೋಡೋಣ. ಇಲ್ಲಿಯ ಚೇಳು, ಹಾವು, ಬೆಂಕಿ, ನೀರು, ಗರಗಸ, ಬೇನೆಗಳೇ ಅಲ್ಲಿಯೂ. ವ್ಯತ್ಯಾಸವಿಷ್ಟೇ- ಅಲ್ಲಿ ಇವುಗಳ ಜೋರು ಹೆಚ್ಚು, ಹಿಂಸೆ ಹೆಚ್ಚು. ಅವುಗಳ ವಿಸ್ತರವಿವರಗಳಲ್ಲಿ ಮಾತ್ರ ಮಾನವನ ಕಲ್ಪನೆಯ ಗುಟ್ಟೂ ದುರ್ಬಲತೆಯೂ ಹೊರಗೆ ಬಿದ್ದಿವೆ. ಕಲ್ಪನೆಯು ಆ ಸ್ವರ್ಗನರಕಗಳನ್ನು ಕಲ್ಪಿಸಲಿಕ್ಕೆಷ್ಟು ಕಷ್ಟಪಟ್ಟಿದೆಯೋ, ಅಷ್ಟೇ ಕಷ್ಟವನ್ನು ಅಲ್ಲಿಯ ಪ್ರಪಂಚದ ಸವಿಸ್ತರ ರಚನೆಗಾಗಿ ಪಟ್ಟಿಲ್ಲವೆಂದು ತೋರುತ್ತದೆ.* ಅವುಗಳ ಬಾಹ್ಯರೇಖೆಗಳಿಗಿಂತ ಹೆಚ್ಚಿನ ವಿಷಯಗಳು ಕೊಡಲ್ಪಟ್ಟಿರುವದಿಲ್ಲ. ಸುಖದುಃಖಗಳ ಅರಿವಂತೂ ಅವನಿಗಿದೆ

* ಗರುಡಪುರಾಣಗಳಲ್ಲಿ ಸ್ವರ್ಗನರಕಗಳ ವಿವರವನ್ನೋದಬಹುದು.

ಯಷ್ಟೆ. ಇವುಗಳೇ ಅಲ್ಲಿ ಅತಿಶಯವಾಗಿವೆಯೆಂದು ಒಟ್ಟಾರೆ ಹೇಳಿಬಿಟ್ಟರೆ ಸಾಕು. ಅವನ ನಂಬಿಕೆಯು ಕೂತೇ ಬಿಡುತ್ತದೆ.

ಇಲ್ಲಿಯವರೆಗೆ ಪ್ರಾಚೀನ ಧರ್ಮದ ಮೊದಲನೆಯ ಕಾರಣವನ್ನು ಚರ್ಚಿಸಿದ್ದಾಯಿತು. ಈಗ ಎರಡನೆಯ ಕಾರಣವನ್ನು ವಿವೇಚಿಸುವ. ಅನೇಕ ಪ್ರಸಿದ್ಧ ಸಮಾಜಶಾಸ್ತ್ರ ವಿಶಾರದರು ಇದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಬಹು ಪ್ರಾಚೀನ ಮಾನವನು ಇತರ ಪಶುಗಳಂತೆ ಧರ್ಮದ ವಾಸನೆಯೇ ಇಲ್ಲದ ಜೀವಿಯಾಗಿದ್ದನು. ತನ್ನ ಸುಖಭೋಗದಿಂದ ಇತರರಿಗಾಗುವ ಸುಖದುಃಖಗಳ ಗೊಡವೆಯೇ ಆತನಿಗಿರಲಿಲ್ಲ. ಅದೇಕೆ– ಈಗಲಾದರೂ ಅಂಥವರೇನೂ ಕಡಿಮೆಯಿಲ್ಲ. ನೆರೆಹೊರೆಯುವರ ಆಹಾರವನ್ನಾಗಲಿ ಹೆಂಗಸನ್ನಾಗಲಿ ತಾವು ಇಚ್ಛಿಸಿದಾಗ ಅವನ್ನು ಪಡೆದುಕೊಳ್ಳುವದು ತಪ್ಪೆಂದು ಆತನಿಗೆ ತೋರುತ್ತಲೇ ಇರಲಿಲ್ಲ. ಅವನ್ನು ವಶಗೊಳಿಸಲಿಕ್ಕೆ ಶಕ್ತಿಯಿದ್ದಲ್ಲಿ ಒಂದೇಟು ಹಾಕಿಬಿಡುವದು. ಇಲ್ಲವಾದರೆ ಸುಮ್ಮನಿರುವದು. ಮನಸ್ಸಿನ ಇಂಥ ಗತಿರೀತಿಗಳಿಂದ ಒಬ್ಬನಿಂದ **ನೈಸರ್ಗಿಕವಾಗಿ** ಇನ್ನೊಬ್ಬನಿಗೆ ಅಪಾಯವಿತ್ತು. ಆದರೆ ಇದೆಷ್ಟು ಕಾಲ ನಡೆದೀತು? ಇದರಿಂದ ಕ್ಷೇಮವಿಲ್ಲ. ಈತನಿಂದ ತೊಂದರೆಯನ್ನು ಪಡೆದ ಇತರರು ಸುಮ್ಮನಿರುವರೋ ? ಈ ಪ್ರಮತ್ತನೊಬ್ಬನಾದರೆ ಇವನನ್ನು ಸಹಿಸಲಾರದವರೆಷ್ಟೋ ಮಂದಿ. ಇವನಂತೆಯೇ ಪ್ರತಿಯೊಬ್ಬನಿಗೂ ಮಾಡುವ ಕಾಂಕ್ಷೆಯಿದೆ, ಶಕ್ತಿಯೂ ಇದೆ. ಹೀಗಿರುವಾಗ ಬಹುಕಾಲ ಸಂಘವು ಬಾಳುವದು ಸಾಧ್ಯವೊ? **ವ್ಯಕ್ತಿಯು ಅರಿತಾಗಲಿ ಅರಿಯದಾಗಲಿ ಜಾತಿಗೆ ವೈರಿಯಾದನೆಂದರೆ, ಅಥವಾ ಜಾತಿಯು ವ್ಯಕ್ತಿಯ ವೈರಿಯಾಯಿತೆಂದರೆ ಬಹುಕಾಲ ಬಾಳದೆ ಆ ಜಾತಿಯೇ ಹಾಳಾಗಿಹೋಗದಿರದು.** ಈ ಬದುಕು ಸೃಷ್ಟಿಯಲ್ಲಿ ಅತಿ ಪ್ರಿಯವಾದದ್ದು. ಅದಕ್ಕೆ ಈ ರೀತಿಯು ಮಾತ್ರ ಅನುಕೂಲವಾದದ್ದಲ್ಲ ಎಂದು ಪಶುಗಳಿಗೆ ಸಹ ಗೊತ್ತು; ಅಂದಮೇಲೆ ವಿಚಾರಶಕ್ತಿಯಲ್ಲಿ ಮಾನವನಿಗೆ ವ್ಯಕ್ತಿ–ವರ್ಗಗಳು ನಾಶವಾಗದಂತೆ ಏನಾದರೊಂದು ವ್ಯವಸ್ಥೆಯನ್ನು ಮಾಡಲೇಬೇಕೆಂದು

ಒಪ್ಪಂದ

ತೋರಿತು. **ಈ ಎಚ್ಚರಿಕೆಯೇ ಧರ್ಮದ ಮೂಲ. ಅದು ಸಫಲವಾಗಬೇಕಾದರೆ ಆ ವರ್ಗದ ಸಕಲರಿಗೂ ಸಮ್ಮತವಾಗಿರುವ ನಿಯಮ ಬೇಕು, ಒಪ್ಪಂದ ಬೇಕು.**

ಇಲ್ಲಿದೆ ಸಂಘದ ಮೂಲ ಸಹ. ಅದನ್ನು ಸೇರಬೇಕಾದರೆ, ಸಂಘಸುಖಕ್ಕಾಗಿ ತನ್ನ ಸ್ವಚ್ಛಂದ ವೃತ್ತಿವ್ಯಾಪಾರಗಳನ್ನು ಬಿಡುವದು ಆತನಿಗೆ ಅನಿವಾರ್ಯವಾಗಿ ಬಿಟ್ಟಿತು. ತನ್ನ ನಡತೆಗೆ ಮುಗದಾಣ ಹಾಕಲೇ ಬೇಕಾಯಿತವನಿಗೆ. ಸಂಘಕ್ಕೆ ಅಹಿತವಾಗದಂತೆ ಹೇಗಿರಬೇಕೆಂಬದೇ ಪ್ರಶ್ನೆಯು. ಅದಕ್ಕೆ ವಿರುದ್ಧವಾಗಿರುವ ಇಂದ್ರಿಯ ವ್ಯಾಪಾರಗಳೆಲ್ಲವನ್ನು ವಿರೋಧಿಸಬೇಕಲ್ಲವೆ ಮತ್ತೆ? ಸಂಘಕ್ಕಾಗಿ ವ್ಯಕ್ತಿಗೆಷ್ಟೋ ನಿರ್ಬಂಧಗಳು ಇರಲೇ ಬೇಕೀಗ. ಇಲ್ಲವಾದರೆ ಸಂಘವೆಲ್ಲಿಯದು? ಈ ನಿರ್ಬಂಧಗಳು ತಾತ್ಕಾಲಿಕ ಇಂದ್ರಿಯಸುಖಕ್ಕೆ ಅನೈಸರ್ಗಿಕವಾಗಿ ತೋರಬಹುದು. ಆದರೂ ಸುಖಪ್ರಿಯನಾದ ಮಾನವನಿಗೆ **ಒಟ್ಟಿನಲ್ಲಿ** ಈ ನಿರ್ಬಂಧಗಳಿಂದ ಹೆಚ್ಚಿನ ಸುಖವು ಸಿಗಲೇಬೇಕು. **ಸಂಘದಲ್ಲಿರಲು ಒಪ್ಪಿಕೊಂಡ ವ್ಯಕ್ತಿಯು, ಸಂಘಕ್ಕಾಗಿ ತನ್ನ ನೈಸರ್ಗಿಕ ರೀತಿಯನ್ನು ಬಿಟ್ಟು ಸಂಘವು ಎಲ್ಲರ ಸಮ್ಮತಿಯಿಂದ ತನ್ನ ಹಿತಕ್ಕಾಗಿ ಮಾಡಿಟ್ಟ ಕೃತ್ರಿಮ ನೀತಿಗಳನ್ನು ಅವಲಂಬಿಸುತ್ತಾನೆ.** ಅದಕ್ಕಾಗಿ ಸಂಘವೂ ಅವನ ಹಿತವನ್ನು ನೋಡಿಕೊಳ್ಳಬೇಕಾಗುತ್ತದೆ. ಈ ನಡತೆಯ ನಿಬಂಧನಗಳು ಬಹುಜನರ ಒಪ್ಪಿಗೆಯಿಂದಲೇ ಉಂಟಾಗುತ್ತವೆ. **ಮೊದಲಿನಲ್ಲಿ ಜನಹಿತವೇ ಇವುಗಳ ಧ್ಯೇಯ. ಜನಮತವೇ ಇವುಗಳ ಬುಗ್ಗೆ ಮತ್ತು ಬೆಂಬಲ.** ಬರಬರುತ್ತ ಇವೇ ಕಾಯದೆಕಟ್ಟಳೆಗಳಾಗುತ್ತವೆ. ಇವುಗಳನ್ನು ಮನ್ನಿಸುವದರಿಂದ ವ್ಯಕ್ತಿಗೆ ಸಂಘದಿಂದ ಕೀರ್ತಿ ಸುಖಸೌಕರ್ಯಗಳು ದೊರೆಯುತ್ತವೆ. ಇವನ್ನು ತಿರಸ್ಕರಿಸುವದರಿಂದ ಅಪಕೀರ್ತಿ ಅಪಾಯಗಳು ಬರುತ್ತವೆ. ಅಪಾಯದಿಂದ ಜೀವಿಯು ದೂರಕ್ಕೆ ಓಡಿಹೋಗುತ್ತದೆ. ಸಮಾಜದ ಕಟ್ಟಳೆಗಳಿಂದ ಅನುಕೂಲತೆಗಳು ದೊರೆಯುತ್ತವೆಂದ ಮೇಲೆ ಅವುಗಳನ್ನು ಆದರಿಸುವದೂ ಬರಬರುತ್ತ ನೈಸರ್ಗಿಕವಾಗಿಯೇ

**ನೀತಿಯು ನೈಸರ್ಗಿಕವೋ?**

ಹೋಗುತ್ತದಲ್ಲವೇ? ಜನಮತಕ್ಕೆ ಆದರವು ಇಲ್ಲಿ ಬಂತು. ಸಂಘವೂ ಇದರಿಂದ ಅಚ್ಚುಕಟ್ಟಾಗಿ ನಿಂತುಬಿಟ್ಟಿತು. ಅದರ ಕಟ್ಟುಕಟ್ಟಳೆಗಳಲ್ಲಿ ವ್ಯಕ್ತಿಗೆ ಸಂಯಮದ ಸಾಧನೆಯೂ ಬಂದು ಸೇರಿಕೊಂಡಿತು. ಮಾನವನು ಸ್ವಚ್ಛಂದ ರೀತಿಯನ್ನು ಸಮಾಜದ ನೀತಿಗೆ ಬಗ್ಗಿಸತೊಡಗಿದನು. ಆತನ ಪ್ರಕೃತಿಯ ಮೇಲೆ ಸಂಘದ ಕೃತ್ರಿಮ ನೀತಿಯ ಸವಾರಿಯು ಬಿತ್ತು. **ಈ ಉಪಪತ್ತಿಯನ್ನು ಪರೀಕ್ಷಿಸಿದರೆ ಅತಿ ಪೂರ್ವದಲ್ಲಿ ಧರ್ಮವು ನೈಸರ್ಗಿಕವಲ್ಲ, ದೇವರು ಹೇಳಿಕೊಟ್ಟದ್ದಲ್ಲ; ವ್ಯಕ್ತಿಸಂಘಗಳು ಪರಸ್ಪರ ಹಿತಕ್ಕಾಗಿ ನೇಮಿಸಿದ ಉಪಾಯಗಳು; ಅವು ಜೀವನಸೂತ್ರಗಳು ಮಾತ್ರವೇ.** ಬರಬರುತ್ತ ದೇವರಿಂದ ಬಂದವೆಂಬ ಕಲ್ಪನೆಯು ಉಂಟಾಯಿತು. ಅಭ್ಯಾಸಬಲದಿಂದ ಇವು ಕೇವಲ ನೈಸರ್ಗಿಕವಾಗಿರುವಂತೆಯೇ ತೋರುತ್ತವೆ. ನಿಜವಾಗಿಯೂ ನೋಡಿದರೆ ಇವು ವ್ಯಕ್ತಿಯ ನೈಸರ್ಗಿಕ ಆಶೆಗಳನ್ನು ಬಗ್ಗಿಸಿಕುಗ್ಗಿಸಿ ಬಿಡುತ್ತವೆ. **ಇಡಿ**ಯಾಗಿ ಮುಂದೆ ಮಾನವನಿಗೆ ತನ್ನ ನಿಸರ್ಗಕ್ಕೆ ಬೇಕಾದ ಸುಖವು ದೊರೆಯುತ್ತದಾದರೂ **ಬಿಡಿ**ಯಾಗಿ ತತ್ಕಾಲಕ್ಕೆ ಅದಕ್ಕೆಷ್ಟೋ ಮುಳ್ಳುಮಣ್ಣು ಬೀಳುತ್ತದೆ.

ಮನುಷ್ಯನು ನಿಸರ್ಗತಃ ಸಂಘಪ್ರಿಯನೆಂದು ಹೇಳುವದು ಕಷ್ಟ. ಎಷ್ಟೋ ಸಂಕಟಸಂಯಮಗಳಿಂದ ಆತನು ಸಂಘ ಜೀವನವನ್ನು ಸ್ವೀಕರಿಸುತ್ತಾನೆ. ಪ್ರತಿಯೊಂದು ಮಗುವೂ ಅಹಂಕಾರದ ಮುದ್ದೆಯೇ. ತನ್ನ ಸುಖಕ್ಕಾಗಿ ಜಗತ್ತನ್ನೇ ಹಿಂಸಿಸಲಿಕ್ಕೆ ಸಿದ್ಧವೇ ಅದು. ಬರಬರುತ್ತ ಮಗುವು ಬೆಳೆದು ಸ್ವಲ್ಪ ತಿಳವಳಿಕೆಯ ಹುಡುಗನಾದಾಗ ಆತನಿಗೆ ಅನೇಕ ಅನುಭವಗಳು ಬರುತ್ತವೆ. ತಾನು ಪರಿಸ್ಥಿತಿಯನ್ನು ಮೆಟ್ಟಿ ಸುಖಿಯಾಗಬೇಕೆಂದು ನೋಡುತ್ತಾನೆ. ಪರಿಸ್ಥಿತಿಯು ಆತನನ್ನೇ ತುಳಿದು ಹಾದಿಗೆ ತರುತ್ತದೆ. ಆಗ ತನ್ನ **ಅಹಂಭಾವವನ್ನು ಬಗ್ಗಿಸಿಟ್ಟು ಪರಿಸ್ಥಿತಿಯೊಡನೆ ಹೊಂದಿಕೆಯುನ್ನು ಬೆಳೆಸಬೇಕಾಗುತ್ತದೆ.** ಅದಕ್ಕಾಗಿ ಆತನಿಗೆಷ್ಟೋ ಕಷ್ಟ. ಎಷ್ಟೋ ಅಪಾಯಗಳು, ಆದರೂ ಹೊಂದಿಕೆಯು ಅಪರಿಹಾರ್ಯವೇ. ಅದಕ್ಕಾಗಿ ಅನೇಕಾನೇಕ ನಿರ್ಬಂಧಗಳ ಬಲೆಯಲ್ಲಿ ಸಿಲುಕಿಬಿದ್ದ

ಮಾನವನು ದೇವಧರ್ಮಗಳಿಗೆ ಮೊರೆಯಿಡುತ್ತಾನೆ. ಇಲ್ಲಿ ಬರುವ ಕಷ್ಟಗಳಿಗೆ ಬದಲಾಗಿ ಮರಣಾನಂತರ ಪ್ರಾಪ್ತಿಯಾಗುವದೆಂದು ಆತನು ಧರ್ಮದ ದೃಷ್ಟಿಯಿಂದ ಭಾವಿಸಿ ತನ್ನನ್ನು ಸಂತೈಸಿಕೊಳ್ಳುತ್ತಾನೆ. ಧರ್ಮದಲ್ಲಿ ಆತನಿಗೆ ಪ್ರತಿಫಲದ ಕೋರಿಕೆಯಿದೆ. ಅದೊಂದು ಪೂರಕ ರಚನೆಯು. ಇಲ್ಲಿಯ ಲೋಪ ಸಂಕಟಗಳಿಗೆ ಅಲ್ಲಿ ಭರ್ತಿಯನ್ನು ಮಾಡಿ ನಿರಂತರ ಸುಖವನ್ನು ಕೊಡುವಂಥಾದ್ದು. ಆತನ ಸಕಲ ಸಂಕಟ ನಿರೋಧಗಳಿಗೂ ಅಲ್ಲಿ ಮೀಸಲಿಟ್ಟ ಪಾರಿತೋಷಕವದು.

**ಲೋಪಕ್ಕೆ ಭರ್ತಿ**

ಧರ್ಮವು ನಿಜವಾದ ವಿವೇಕಯುತ ಸಂಸ್ಕೃತಿಯ ಮತ್ತು ಅದರಿಂದ ಜಗತ್ತಿಗಾಗಬಹುದಾದ ಸುಖ ಸೌಭಾಗ್ಯ ಪ್ರಗತಿಗಳ ವೈರಿಯೆಂದು ಅನೇಕಾನೇಕ ವಿಮರ್ಶಗಾರರ ಅಭಿಪ್ರಾಯ. ತಮ್ಮ ಅಭಿಪ್ರಾಯವು ಜಗತ್ತಿನ ಸುಖವನ್ನು ಶೀಘ್ರ ವಾಗಿ ಸಮೃದ್ಧಿಯಾಗಿ ಬೆಳೆಸುವ ರೀತಿಯೆಂದು ಅವರೆನ್ನುತ್ತಾರೆ. ಆದರೂ ಜನಸಾಮಾನ್ಯವು ತನ್ನ ಪ್ರಾಚೀನ ಮನೋಗತಿಯಲ್ಲಿಯೇ ಇದೆ. ಭಯಸಂಕಟಗಳಿಂದೇರ್ಪಟ್ಟ ಧರ್ಮದಿಂದಲೇ ಸಂಘದೊಡನೆ ಹೊಂದಿಕೊಂಡು ಬದುಕುತ್ತಿದೆ. ನಿರ್ಬಂಧನಗಳಿಗಾಗಿ ಇಲ್ಲಿಯಲ್ಲಿಯ ದಂಡನೆಗಳಿಗಾಗಿ ಮರಣಾನಂತರದ ಸ್ವರ್ಗನರಕಗಳ ಪ್ರಿಯಾಪ್ರಿಯ ಊಹೆನಂಬಿಕೆಗಳ ಸಂಕಲೆಯನ್ನು ತುಸು ಹೊತ್ತು ಹರಿದುಬಿಟ್ಟರೆ, ಮತ್ತೆ ಈಗ ನಾಗರಿಕರಂತೆ ತೋರುವ ಜನಸಮೂಹವು ತನ್ನ ಬಹು ಪ್ರಾಚೀನ ಪಶುಗುಣಗಳನ್ನು ನಡೆಸದೆ ಇರದು. ಯಾಕೆ? **ಈ ನಾಗರಿಕತೆಯು ಇನ್ನೂ ಭಯಸುಖಾಪೇಕ್ಷೆಗಳ ಬುನಾದಿಯ ಮೇಲೆ ನಿಂತಿದೆ. ಇವು ತೋರಿಕೆಯ ವ್ಯವಸ್ಥೆಯನ್ನಿಡಬಲ್ಲವಾದರೂ ಮನಸ್ಸನ್ನು ಮಾರ್ಪಡಿಸುವದಿಲ್ಲ.** ಇವೂ ಅವಸರಕ್ಕೆ ಬೇಕಾದ ವಿಷಯಗಳೇ. ಆದರೂ ಅವಸರವು ತತ್ತ್ವವನ್ನು ಹೂಡುವದಿಲ್ಲ. ತಕ್ಕಮಟ್ಟಿಗೆ ಇದಕ್ಕೆ ಸಹಾಯಕಾರಿಯಾಗಬಹುದಾದರೂ ಇದರ ವಾಗಲಾರದು. ಬೇಲಿಯ ಪೊದೆ ತೋಟದ ಚಿಕ್ಕ ಗಿಡಗಳನ್ನು ದನ ಕುರಿ ಮುಂತಾದ ವೈರಿಗಳಿಂದ ಕಾಪಾಡೀತು. ಆದರೆ ಗಿಡಗಳ ನೀರು ಗೊಬ್ಬರಗಳನ್ನು ತಾವೇ ಹೀರಿ ಬೇಲಿಯ ಗಿಡಗಳೇ ಬೆಳೆದರೆ ಅವು

ತೋಟವನ್ನು ಉಂಟುಮಾಡಲಾರವು. ತೋಟವನ್ನು ಕಾಪಾಡ ಲಿಕ್ಕಿಟ್ಟವುಗಳು ತೋಟಕ್ಕೇ ವೈರಿಗಳಾಗುವವು. ಹಾಗೆಯೇ ಅವಸರದ ಸಾಧನಸಂವಿಧಾನಗಳು ಎಂದೋ ಒಮ್ಮೆ ಬೇಲಿಯಾಗಬಲ್ಲವೇ ಹೊರತು ಧರ್ಮದ ಉದ್ಯಾನವೇ ಆಗಲಾರವು. ತಮ್ಮ ಮಿತಿಮೇರೆಗಳನ್ನು ಮೀರಿಹೋದರೆ ಆ ಉದ್ಯಾನಕ್ಕೇ ಬದಲಾಗಿ ತಾವೇ ಬೆಳೆದು ಘೋರವಾದ ಅರಣ್ಯವನ್ನೇ ಉಂಟುಮಾಡುವವು. ಹೀಗಿರೋಣದರಿಂದ 'ಈ ಧರ್ಮವಿಲ್ಲವಾದರೇ ಜಗತ್ತೊಂದು ಪಿಶಾಚನಿಶಾಚರರ ಲೀಲಾರಂಗವೇ ಆದೀತು' ಎಂದು ಹೇಳುವದು ಅವಿವೇಕವೇ. ಯಾಕೆಂದರೆ ನಿಜವಾದ ಧರ್ಮವು ಬೇಲಿಯಲ್ಲಿಲ್ಲ. ಫಲವತ್ತಾಗಿರತಕ್ಕ ತೋಟದಲ್ಲಿದೆ. **ಹೊರಗಿನ ನಿರ್ಬಂಧಗಳಿಗೆ ಬಗ್ಗಿಕೊಂಡು ನಡೆಯುವ ಧರ್ಮವು ಬಹುಕಾಲ ನಡೆದರೆ ಅದು ಕ್ಲೈಬ್ಯಕುಹನೆಗಳ ಗದ್ದೆಯಾಗುತ್ತದೆ.** ಧರ್ಮವು ಒಳಗಿನಿಂದ ಪ್ರೇರೇಪಿಸಬೇಕು. ಅಲ್ಲದೆ ಹೊರಗಿನಿಂದ ದಬಾಯಿಸುವದು ಧರ್ಮವಲ್ಲ. ಈ ವಿಷಯವನ್ನು ಮುಂದೆ ವಿವರವಾಗಿ ಚರ್ಚಿಸಲಾಗುವದು. ಒತ್ತಾಯದ ಕರ್ಮವು ಧರ್ಮವಲ್ಲ. ಬೇಕೆಂದು ಉಲ್ಲಾಸದಿಂದ ಮಾಡಿದ ಕರ್ಮದಲ್ಲಿಯೇ ಧರ್ಮವು ಇರುವದು.

ಕ್ಲೈಬ್ಯಕುಹನೆಗಳ ಮೂಲ

ಈಗಿನ ಧರ್ಮದ ಬಾಹ್ಯನಿರ್ಬಂಧಗಳನ್ನು ತೆಗೆದುಹಾಕಿದರೆ ಮನುಷ್ಯನು ಮತ್ತೆ ಪಶುಪಿಶಾಚಿಯಾಗುವನೆಂದೊಮ್ಮೆ ಹೇಳಿದೆಯಷ್ಟೆ. ಹಾಗಿದ್ದು ತನ್ನ ಶೋಕಿನಲ್ಲಿಯೇ ಮನುಷ್ಯನು ಬಿದ್ದು ಮೈಮರೆತು ಇತರರನ್ನು ಹಿಂಸಿಸದಿರನು. ನಾಗರಿಕತೆಯು ಬೇಕಾದರೆ ಅವನಿಗೆ ನಿರೋಧವು ಬೇಕು. ತ್ಯಾಗವು ಬೇಕು. ಅವನ್ನು ಕೈಕೊಳ್ಳುತ್ತಾನೆ. ಆದರೆ **ಅವುಗಳ ಜಾಗೆಯಲ್ಲಿ ಆತನು ತಕ್ಕ ಭರ್ತಿಯನ್ನು ದೇವರ ಕಡೆಯಿಂದ ಕೋರುತ್ತಾನೆ, ಬೇಡುತ್ತಾನೆ.** ಧರ್ಮವು ಈ ರೀತಿಯಿಂದ ಮಾನವನನ್ನು ಸಂಘಸಂಸ್ಕೃತಿಗಳಿಗೆ ಹೊಂದಿಸುತ್ತದೆ. ನಾಗರಿಕತೆಯು ವ್ಯಕ್ತಿಗೆ ಮತ್ತು ಆತನ ತ್ಯಾಗಸಂಯಮಗಳಿಗೆ ಬದಲಾಗಿ ಕೊಡುವ ಪ್ರತಿಫಲವೆಂದರೆ ಈ ಧರ್ಮಕ್ಕೆ ಸೇರಿದ ಸಮಾಧಾನವೇ.

ನಾವು ಅತ್ಯಾಚಾರ ದುರಾಚಾರಗಳಿಂದ ಹಿಂಜರಿಯುತ್ತೇವೆ. ಬೇಕು ಬೇಕಾದ ಹೆಂಗಸರ ಮೇಲೆ ಕೈಹಾಕಲಿಕ್ಕೆ ಹೆದರುತ್ತೇವೆ. ಬೀದಿ ಯಲ್ಲಿ ಹಾದಿಯ ರೀತಿನೀತಿಗಳನ್ನವಲಂಬಿಸಿ ಇತರರ ಸೌಕರ್ಯದ ಕಡೆಗೂ ನೋಡುತ್ತೇವೆ. ವಾಕ್ ವಿಚಾರ ಕಾರ್ಯಗಳಲ್ಲಿಯೂ ಇತ ರರನ್ನು ಮೊದಲು ಲೆಕ್ಕದಲ್ಲಿಟ್ಟುಕೊಂಡೇ ನಡೆಯುತ್ತೇವೆ. ಆಹಾರ ವಿಹಾರಗಳಲ್ಲಿಯೂ ಅಷ್ಟೇ ಏಕೆ- ಮಲಮೂತ್ರ ವಿಸರ್ಜನೆಗಳಲ್ಲಿಯೂ ನಾವು ಸಂಘದ ರೀತಿಯನ್ನು ಮನ್ನಿಸುತ್ತೇವೆ. ನೈಸರ್ಗಿಕವಾದ ಸ್ವಚ್ಛಂದವೃತ್ತಿಯು ಅನೇಕಾನೇಕ ಸಂಯಮಗಳ ಸಾಧನದಿಂದ ಬಿಗಿಯಲ್ಪಟ್ಟಿದೆ. ಅದರಿಂದ ಮನುಷ್ಯನೆಂಬ ನೈಸರ್ಗಿಕ ಮಗು ಸಾಮಾ ಜಿಕ ಜೀವಿಯಾಗಿದ್ದಾನೆ. ಅದರಿಂದಲೇ ಸಂಘವು ಉಂಟಾಗಿದೆ. ಪ್ರಾಚೀನ ಮಾನವನ ದೇವಧರ್ಮಗಳು ಮಾಡಿದ ಈ ಕೆಲಸವು ದೊಡ್ಡ ಕೆಲಸವೇ. ಆದರೆ ಇದಕ್ಕಾಗಿ ತನಗೆ ಪ್ರಿಯವಾದ, ತನ್ನನ್ನು ಉತ್ತೇಜಿಸುವ ಎಷ್ಟೊಂದು ಸುಖ ವ್ಯಾಪಾರಗಳನ್ನು ಆತನಿಗೆ ತ್ಯಜಿಸ ಬೇಕಾಯಿತು! ಸುಖವು ಜೀವಿಯ ಒತ್ತಾಯ. ಹೀಗಿರುವಾಗ ಅದರ

**ಕಷ್ಟಕ್ಕೆ ತಕ್ಕ ಇಷ್ಟ**

ತ್ಯಾಗವು ಸುಲಭವಲ್ಲ. ಈ ತ್ಯಾಗವು ಆತನ ಧರ್ಮ ವೊಂದರಿಂದಲೇ ಸಾಧ್ಯವಾಯಿತೆಂದು ಹೇಳಬಹುದು. ಆದರ ಊಹೆ ಮತ್ತು ಕೋರಿಕೆಗಳ ಸಮಾಧಾನವಿದ್ದಿಲ್ಲವಾದರೆ ಇಂಥ ತ್ಯಾಗವು ಬಹುಕಷ್ಟ ಸಾಧ್ಯವಾಗುತ್ತಿತ್ತು. ಒತ್ತಿಟ್ಟ ಆಕಾಂಕ್ಷೆಗಳ ತಡೆದಿಟ್ಟ ಭೋಗಾಭಿಲಾಷೆಗಳ, ಕೊನೆಗಾಣದ ಇಂದ್ರಿಯವಾಸನೆಗಳ, ತ್ಯಜಿಸಿಬಿಟ್ಟ ವಿಲಾಸೋಲ್ಲಾಸಗಳ ಹೃದಯವೇದನೆಗಳನ್ನು ಹೇಳಿ ಕೊಳ್ಳಲಿಕ್ಕೆ ಒಬ್ಬ ದೇವರಿದ್ದಿಲ್ಲವಾದರೆ ಇವೆಲ್ಲ ಸಾಧ್ಯವಾಗುತ್ತಲೇ ಇದ್ದಿಲ್ಲ. ಸಂಘಜೀವನದ ಸರಳವಾದ ಸಾಗುವಿಕೆಗಾಗಿ ಹೂಡಿದ ನಿರೋಧಗಳಿಗೂ ಅವುಗಳ ಸಾಧನೆಯಲ್ಲಿ ಬರುವ ಕುಂದುಕೊರತೆ ಗಳಿಗೂ ಹಾಗು ಇವುಗಳಿಂದುಂಟಾಗುವ ಕಷ್ಟಪಶ್ಚಾತ್ತಾಪಗಳಿಗೂ ಆತನೇ ಸಮಾಧಾನವನ್ನು ಕೊಡುವವನಾಗಿರುತ್ತಾನೆ. ಆತನನ್ನು ನಾಗರಿಕತೆಯು ಹುಟ್ಟಿಸಿದೆ. ಆತನಿಂದ ನಾಗರಿಕತೆಯು ಸಮಾಧಾನ ವನ್ನೂ ಪಡೆಯುತ್ತಿದೆ.

ಇಲ್ಲಿಗೇ ಮಾನವನ ಕಷ್ಟನಷ್ಟಗಳು ಮುಗಿಯಲಿಲ್ಲ. ನಮಗೆ ಇತರರಿಂದ ಕಾಪಾಡುವದಕ್ಕಾಗಿ ಮಾತ್ರವೇ ಅಲ್ಲ ಒಂದು ಆಶ್ರಯವು ಬೇಕಾದುದು. ನಮ್ಮ ಆಶೆಗಳ ಏರಾಟವೇ ಎಷ್ಟೋ ಇದೆ. ನಮ್ಮ ಅಂತಃಕರಣವೇ ಎಷ್ಟೋ ಸಲ ಒಳಗಿನಿಂದ ಚುಚ್ಚುತ್ತಿರುತ್ತದೆ. ಪಶ್ಚಾತ್ತಾಪದ ಕೊಂಡಿಯೂ ಒಮ್ಮೊಮ್ಮೆ ದಾಕ್ಷಿಣ್ಯವಿಲ್ಲದೆ ಹೊಡೆಯುತ್ತದೆ. ಇದೆಲ್ಲ ಯಾಕೆಂದರೆ ನಮಗೆ ನಾಗರಿಕ ಪ್ರಪಂಚದಲ್ಲಿ ಜವಾಬ್ದಾರಿಯಿಲ್ಲದ ಬಾಲ್ಯವು ಹೋಗಿ ಯೌವನವು ಬಂದಿದೆಯಾದರೂ ಸಂಘದೊಡನೆ ವ್ಯಕ್ತಿಯ ಹೊಂದಿಕೆಯು ಸಾಕಷ್ಟು ನೈಸರ್ಗಿಕವಾಗಿ ಆಗಲೇ ಇಲ್ಲ. ನಾಗರಿಕತೆಯು ಕೃತ್ರಿಮವೆಂದು ಮೊದಲೇ ಹೇಳಿದೆಯಷ್ಟೆ. ಅಭ್ಯಾಸಬಲದಿಂದ ಬರಬರುತ್ತ ಮನುಷ್ಯನ ಪ್ರಕೃತಿಯಲ್ಲಿ ಅದರೊಡನೆ ಧಾರಾಳವಾಗಿ ಕಲೆತು ಹೋಗುವ ಶಕ್ತಿಯಿದ್ದರೂ ಆತನು ಇನ್ನೂ ಸಾಕಷ್ಟು ಒಂದಾಗಲಿಲ್ಲ. ಹಾಗೆ ಒಂದಾಗಬೇಕಾದರೆ ಕೃತ್ರಿಮತೆಯು ಅವನ ನೈಸರ್ಗಿಕ ಆಶಾವಾಸನೆಗಳಿಗೆ ಬಹುವಾಗಿ ಇದಿರಾಗಿರಬಾರದು. ಅದರಿಂದ ಆತನ ಸಹಜಸ್ಫೂರ್ತಿಗಳಿಗೆ ವಿಶೇಷವಾದ ನಿರ್ಬಂಧವಿರಬಾರದು. **ಕೃತ್ರಿಮತೆಯು ನಿರ್ಬಂಧಗಳನ್ನೇ ಗಮ್ಯವಾಗಿಟ್ಟುಕೊಳ್ಳದೆ ವಾಸನಾಸ್ಫೂರ್ತಿಗಳ ಭೋಗವ್ಯವಸ್ಥೆಯನ್ನು ಕಣ್ಣಮುಂದೆ ಇಟ್ಟುಕೊಳ್ಳಬೇಕು.** ಆ ಭೋಗವ್ಯವಸ್ಥೆಯು ವ್ಯಕ್ತಿಸಮಾಜಗಳ ಪ್ರಗತಿಗೂ ಅನುಕೂಲವಾಗಿರಬೇಕು. ಅಂಥ ಕೃತ್ರಿಮತೆಯು ಮೊದಲು ಮೊದಲು ಹಾಗಿರುವದಾದರೂ, **ಒಟ್ಟಿನಲ್ಲಿ** ಅದಕ್ಕೆ ಪ್ರಕೃತಿಯೊಡನೆ ಹೊಂದಿಕೆಯಿದೆಯೆನ್ನಬೇಕು. ಯಾಕೆಂದರೆ ಪ್ರಕೃತಿಯಲ್ಲಿಯೂ ನಡೆಯುವದು ಪ್ರಗತಿಯೇ. ಅದು ನಿಧಾನವಾಗಿ ಇಲ್ಲಿ ನಡೆಯುತ್ತದೆ. ಆದರೆ **ಮಾನವನು ಯೋಗ್ಯವಾದ ವ್ಯವಸ್ಥೆಗಳಿಂದ ಅದನ್ನು ವೇಗದಿಂದ ನಡೆಸಬಲ್ಲ.** ಅದರ ಫಲಗಳನ್ನು ಬಹು ಶೀಘ್ರವಾಗಿ ಕೈಗೂಡಿಸಿಕೊಳ್ಳಬಲ್ಲ. ಹಾಗಾಗಬೇಕಾದರೆ ಮಾತ್ರ **ಅವಸರದ ಕೃತ್ರಿಮತೆಯು ಒಟ್ಟಿನಲ್ಲಿ ಪ್ರಕೃತಿಯ ಉದ್ದಿಶ್ಯವನ್ನೇ ಅರಿತು ಹೊಂದಿಕೊಳ್ಳುವದಾಗಿರಬೇಕು.**

**ಯೋಗ್ಯಾಯೋಗ್ಯ ಕೃತ್ರಿಮತೆಗಳು**

ಆವಾಗ ಇಂದಿನ ನಿರ್ಬಂಧಗಳು ನಾಳಿನ ಮತ್ತು ಬಹುಕಾಲ ನಡೆಯುವ ಸುಖಸಂಪತ್ತಿಗಳ ಉಪಾಯಗಳಾಗಿ ಪರಿಣಮಿಸುತ್ತವೆ. ಅಲ್ಲದೆ, ಅವುಗಳ ಸಲುವಾಗಿ ಸ್ವರ್ಗದ ಹಾದಿಯನ್ನು ನೋಡಬೇಕಾಗಿಲ್ಲ. **ಅವಿಲ್ಲಿಯೇ ದೊರೆಯುತ್ತವೆ.**

ದೇವ-ಧರ್ಮ-ಸ್ವರ್ಗ-ನರಕ ಮುಂತಾದ ಭಾವನೆಗಳು ಸಮಾಧಾನವನ್ನು ಕೊಡಬಲ್ಲವು. ಅದೂ ಬಲವಾದ ವಿಚಾರವಿಲ್ಲದ ಮನಸ್ಸಿಗೆ. ವ್ಯಕ್ತಿಯ ಹಿತ ಉದ್ಧಾರಗಳು ಸಂಘದ ನಾಗರಿಕತೆಯಲ್ಲಿಲ್ಲವೆಂಬ ಮನವರಿಕೆಯು ಅವನ ಎಚ್ಚೆತ್ತ ವಿಚಾರಕ್ಕೆ ಬಂದಲ್ಲಿ ಆತನ ಗತಿಯೇನು? ಆಗ ತನ್ನ ವ್ಯವಸ್ಥೆಯನ್ನು ಆತನು ತಾನೇ ಮಾಡಿಕೊಳ್ಳಬೇಕು.. ಆದರೆ ಅದು ನಾಗರಿಕತೆಯ ನೀತಿರೀತಿಗಳಿಗೆ ವಿರುದ್ಧವಾಗಿದೆಯಲ್ಲವೆ? ಸಮಾಜದ ವಿಚಾರವು ಇವನ ವಿಚಾರದಷ್ಟು ಎಚ್ಚರಗೊಳ್ಳಲಿಲ್ಲ. ಈತನ ಎಚ್ಚೆತ್ತ ವಿಚಾರಕ್ಕೆ ಅದರ ಹಾದಿಯು ಮಂಥರ ಮಾರ್ಗ; ಅಂದರೆ ಶಂಖದ ಹುಳದ ಕಾಲಿಗೇ ಯೋಗ್ಯವಾದ ಹಾದಿ, ಹೊರತು ಮನುಷ್ಯರಿಗೆ ಯೋಗ್ಯವಾದದ್ದಲ್ಲ. **ಈತನು ಅದನ್ನು ತುಳಿಯಲೊಲ್ಲನು, ಬಹಿರಂಗವಾಗಿ ತನ್ನ ಹಾದಿಗೂ ಪೂರ್ತಿ ಇಳಿದು ಸುಖಿಸಲೊಲ್ಲನು.** ಅವನ ಎಚ್ಚೆತ್ತ ಹೃದಯವು ಅವನನ್ನು ಉಭಯಸಂಕಟಗಳಲ್ಲಿ ಮುಣುಗಿಸುತ್ತದೆ. ಬಹಿರಂಗವಾಗಿ ಶಾಸನವಿರುದ್ಧ ನಡೆಯುವವನನ್ನು ಹಾದಿಗೆ ತರಲಿಕ್ಕೆ ಕೋರ್ಟು ಕಚೇರಿಗಳಿವೆ. ಪೋಲಿಸ ಸಿಪಾಯಿಗಳಿದ್ದಾರೆ. ಇವನ ಸಂಕಟವು ಹಾಗಲ್ಲ. ಒಳಗಿಂದೊಳಗೇ ಕೊರಗಿಸುವ ಸ್ಥಿತಿಯಿವನದು.

**ಒಳಗಣ ಹೋರಾಟ**

ಇದಕ್ಕೆ ಸಂಘವು ಏನು ಮಾಡಬೇಕು? ಈ ಒಳಗಿನ ದಾಡುದಂಗೆಗಳನ್ನು ನೋಡಿ ದಬಾಯಿಸಲಿಕ್ಕೆ ಏನಾದರೊಂದು ವ್ಯವಸ್ಥೆ ಬೇಕಲ್ಲವೇ? ಅದು ಮನಃಸಾಕ್ಷಿಯೆಂದು ಕೆಲವರೆನ್ನುತ್ತಾರೆ. ಕೆಲವು ಮತಗಳದಕ್ಕೆ 'ದೇವರ ಮನೆ' ಯೆಂದೂ, ಮನೋದೇವತೆಯೆಂದೂ ಕರೆಯುತ್ತವೆ. ಒಳಗೆ ದೇವರು ಕೂತು ನೋಡುತ್ತಾನಂತೆ, ಹೇಳುತ್ತಾನಂತೆ. ನಮ್ಮಿಂದ ಸ್ವಲ್ಪಾದರೂ ತಪ್ಪಾಯಿತೋ, ಈ ಒಳಗಿನ

ಧ್ವನಿಯು ಕುಕ್ಕತೊಡಗುತ್ತದೆ. ಆದರೆ ಆ ತಪ್ಪು ಅಂದರೆ ಯಾವುದು? ಸಂಘಕ್ಕೆ ಅಸಮ್ಮತವಾದ ವಿಚಾರ ಆಚರಣ- ಅಷ್ಟೇ. ಇವನಿಗೋ ಅದು ತಪ್ಪಲ್ಲವೆಂದು ಹೊಳೆದರೂ ಹಾಗೆ ಅಷ್ಟೊಂದು ನಿಶ್ಚಯವಿಲ್ಲ. ಮನಸ್ಸು 'ಅಯ್ಯೋ ನಾನು ಹೀಗೆ ಮಾಡುತ್ತಿದ್ದೇನಲ್ಲ! 'ಎಂದು ಗೋಳಾಡುತ್ತದೆ. ಬೀದಿಯಲ್ಲಿ ಹೋಗುವವರನ್ನು ನೋಡಿ ನಾಯಿಯು ಬೊಗಳುತ್ತದೆ; ಆದರೆ ಆತನನ್ನು ತಡೆಯಲಾರದು. ಹಾಗೆಯೇ ಈ ಮನಃಸಾಕ್ಷಿ. ಒಳಗೇ ಇದರ ಹಿಂಸೆ, 'ಇದು ಸರಿಯಲ್ಲ' ಎಂಬ ಕೂಗು. ಈ ರೀತಿ ಅನುತಾಪದಿಂದ ಹೃದಯವು ಹಿಂಡಲ್ಪಟ್ಟು ಅಸಮಾಧಾನದಿಂದ ಮನುಷ್ಯನು ಹುಚ್ಚನಂತಾಗುತ್ತಾನೆ. **ಈ ದೇವತೆಯು ಸಂಘವು ವ್ಯಕ್ತಿಯೊಳಗಿಟ್ಟ ಸಿಪಾಯಿ. ರೂಢಿಯು ಪ್ರತಿ ಮನುಷ್ಯನ ಹೃದಯದಲ್ಲಿಟ್ಟ ಪ್ರತಿನಿಧಿ.** ಈ ಸಿಪಾಯಿಯ ಹಿಂಸೆಯು ಇರುವವರೆಗೆ ಸಮಾಧಾನವನ್ನೀಯುವ ಒಂದು ಶಕ್ತಿಯೂ ಬೇಕಲ್ಲವೆ? ನಮ್ಮ ಪ್ರಾರ್ಥನೆಗಳನ್ನು ಅಂಗೀಕರಿಸಿ ನಮ್ಮ ಪಾಪಗಳನ್ನು ಕ್ಷಮಿಸುವದಕ್ಕೆ ನಮ್ಮ ಅನಿವಾರ್ಯ ದೇವರಿಗಿಂತ ಹೆಚ್ಚಿನವರಿನ್ನಾರಿರುವರು? ಇಲ್ಲಿ ಧರ್ಮದ ಇನ್ನೊಂದುಪಯೋಗವು ಹೊರಟಿತು. ದೇವರು ಮತ್ತು ಧರ್ಮ ಅಂದರೆ ಒಂದು ವಿಮೆ, 'ಇನ್‌ಶುರೆನ್ಸ್' ಇದ್ದಂತೆಯೇ. ಇಲ್ಲಿಯ ತ್ಯಾಗಗಳಿಗೂ ತೊಂದರೆಗಳಿಗೂ ಬದಲಾಗಿ ಭರ್ತಿ ಮತ್ತು ಸಮಾಧಾನವು ಇವುಗಳಿಂದ ಸಿಗುತ್ತದಲ್ಲವೆ? ಇಲ್ಲಿ ಮನೋದೇವತೆಯ ಕಾಟಕ್ಕೆ ಇವು ಅಫೀಮು; ಮರಣಾನಂತರ ಇಲ್ಲಿಯ ತ್ಯಾಗ ನಿರೋಧ ನಿರ್ಬಂಧಗಳಿಂದುಂಟಾದ ಪುಣ್ಯಕ್ಕೆ ತಕ್ಕ ಫಲವನ್ನಿವು ಕೊಡುತ್ತವೆ. **ಜನರ ಅವಸರಾವಶ್ಯಕತೆಗಳು ಬದಲಾದಂತೆ ಅವನ್ನು ಪೂರೈಸಲಿಕ್ಕೆ ದೇವರ ವ್ಯಾಖ್ಯೆಯೂ ರಚನೆಯೂ ಧರ್ಮದ ಉಪದೇಶವೂ ಮಾರ್ಪಡುತ್ತ ಹೋದದ್ದನ್ನು ಇತಿಹಾಸದಲ್ಲಿ ಸ್ಪಷ್ಟವಾಗಿ ಕಾಣಬಹುದು.**

ನಮ್ಮೊಳಗಣ ಸಂಘಧ್ವನಿ

ಮೊದಲು ಮೊದಲು ದೇವರು ಜನಾಂಗವನ್ನು ಪ್ರಕೃತಿಯ ಕ್ರೂರವಿಕಾರ ಉತ್ಪಾತಗಳಿಂದ ಕಾಪಾಡುವದಕ್ಕಾಗಿ. ಭೌತಿಕ ಶಾಸ್ತ್ರ ವಿಜ್ಞಾನೋಪಯೋಗಗಳು ಬೆಳೆದಂತೆ ಮನುಷ್ಯನಿಗೆ ಈ

ವಿಧವಾದ ತೊಂದರೆಗಳು ತಾವೇ ಕಡಿಮೆಯಾಗುತ್ತವೆ. ಜರಾವ್ಯಾಧಿ ಕ್ಷಾಮ ಇತ್ಯಾದಿಗಳಲ್ಲನೇಕವನ್ನು ಆತನು ತಾನೇ ಪರಿಹರಿಸಬಲ್ಲವನಾಗುತ್ತಾನೆ, ಆಗ ಸಂರಕ್ಷಕ ದೇವರ ಅವಶ್ಯಕತೆ ಕಡಿಮೆಯಾಗುತ್ತ ಹೋಗುತ್ತದೆ. ಸಂಕಟ ಬಂದರೆ ವೆಂಕಟರಮಣ. ಆ ಸಂಕಟವು ಸುಲಭಪರಿಹಾರ್ಯವಾದರೆ ಆ ವೆಂಕಟರಮಣನ ಭಕ್ತಿಯೂ ಸುಮಾರಿನದೇ ಎನ್ನಬೇಕು. ಸಂಕಟವು ಮನುಷ್ಯನಪ್ರಯತ್ನವನ್ನು ಮೀರಿದಂತೆ ವೆಂಕಟರಮಣನ ಅವಶ್ಯಕತೆಯೂ ಹೆಚ್ಚು, ಭಕ್ತಿಯೂ ಹೆಚ್ಚು! ವಿಜ್ಞಾನದ ಉಪಕಾರದೊಡನೆ ದೇವರಿಗೆ ಭೌತಿಕರಂಗದಲ್ಲಿ ಬಹಿಷ್ಕಾರ ಬೀಳುತ್ತ ಹೋಗುತ್ತಿರುವದರಲ್ಲೇನಾಶ್ಚರ್ಯ? ನಿಜರಂಗದಲ್ಲಿಯೇ ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ, ಅಂದಮೇಲೆ ಕಲ್ಪನಾ ಪ್ರಪಂಚದಲ್ಲಿ ಯಾರ ದಾಕ್ಷಿಣ್ಯ? ಆದರೆ ನಾಗರಿಕತೆಯು ಬೆಳೆಯುತ್ತ ಹೋಗುತ್ತಿದೆಯಷ್ಟೇ? ಹಾಗೆಯೇ ಅದರೊಡನೆ

ದೇವರ ಪ್ರಗತಿ

ಹೊಂದಿಕೆಯೂ ಬಿಕ್ಕಟ್ಟಾಗುತ್ತಿರುವದರಿಂದ ಅನುತಾಪವೂ ಹೆಚ್ಚಾಗುತ್ತಿದೆ. ಮನುಷ್ಯನ ಈ **ಅನುತಪ್ತ ಹೃದಯಕ್ಕೆ ದೇವರು ಬಲವಾದ ಆಶ್ರಯವಾಗಿ ನಿಂತು ಬಿಟ್ಟಿದ್ದಾನೆ.** ಧರ್ಮವು ಅಲ್ಲಿ ತಂಗಾಳಿಯನ್ನು ಬೀಸುತ್ತಲಿದೆ. ಸಾರಾಂಶ-- ಮಾನವನ ಪರಿಸ್ಥಿತಿ, ತನುಮನಸ್ಸು, ಅವಸರಾವಶ್ಯಕತೆ ಇವುಗಳನ್ನು ಪರಿಶೀಲಿಸಿ ನೋಡಿದಂತೆ ಧರ್ಮದ ಬೇರುಗಳೂ ಬೆಳಕಿಗೆ ಬರುವವು. ಪರಿಸ್ಥಿತಿಯ ದಬ್ಬಾಳಿಕೆಯೊಂದು ಕಡೆ, ಬದುಕುವ ಆಶೆಯಿನ್ನೊಂದು ಕಡೆ; ಇಂದ್ರಿಯಗಳ ಒತ್ತಾಯ ಒಂದು ಕಡೆ, ಸಂಘದ ನಿರ್ಬಂಧಗಳಿನ್ನೊಂದು ಕಡೆ; ಈ ಹುಚ್ಚುಗಾಳಿಯಲ್ಲಿ ಗರಿಯಂತೆ ಬಿದ್ದ ಮಾನವನ ಭಯ, ನಿರೋಧ, ತ್ಯಾಗ, ನಿರ್ಬಂಧಗಳಿಗೆ ದೇವಧರ್ಮಗಳೇ ಕೈವಾರಿ, ಅವೇ ಶಾಂತಿಯ ಬುಗ್ಗೆಗಳು, ಒಂದಿರುವತನಕ ಇನ್ನೊಂದಿಲ್ಲದೆ ಹೋಗದು. ಮೂಲ ಕಾರಣಗಳಿನ್ನೂ ಹಾಗೇ ಇವೆ. ಅದಕ್ಕಾಗಿ ದೇವಧರ್ಮ ಇತ್ಯಾದಿಗಳ ಹಿಡಿತವೂ ಅಧಿಕಾರವೂ ಜನಸಮುದಾಯದ ಮೇಲೆ ಚನ್ನಾಗಿಯೇ ಇದೆ.

---

## ೪ನೆಯ ಪ್ರಕರಣ

# ಅತಿ ಆಶೆ ಗತಿಗೇಡು



ಸೃಷ್ಟಿಗೆ ಅಪರಿಚಿತನಾದ ಮನುಷ್ಯನು ಅದರ ಭಯಂಕರ ವ್ಯತ್ಯಾಸಗಳನ್ನು ತಿಳಿಯದೆ ಸಹಿಸದೆ ತಾನು ಸುರಕ್ಷಿತನಾಗಿರುವಂತೆ ತನ್ನ ಸ್ವಾಸ್ಥ್ಯಕ್ಕಾಗಿ ಮಾಡಿದ ಧರ್ಮವು ನಾಗರಿಕತೆಯ ಸಂಕುಲತೆಯು ಬೆಳೆದಂತೆ ಭಿನ್ನ ಭಿನ್ನ ಅವಶ್ಯಕತೆಗಳನ್ನು ಪೂರೈಸುತ್ತ ಹೋಯಿತು. ಸ್ವಾಸ್ಥ್ಯದಿಂದ, ಸುಖ, ಅಲ್ಲಿಂದ ಸಮಾಧಾನ- ಇವೆಲ್ಲ ಆತನ ಧರ್ಮದ ಆಶೀರ್ವಾದಗಳು. ಸಂಘಜೀವನವು ಕೇವಲ ಸುಖಕ್ಕಾಗಿ ಏರ್ಪಟ್ಟಿತು. ಆದರೆ ನಾಗರಿಕತೆಯೆಂಬ ಬಲೆಯ ಕಣ್ಣುಗಳು ಹೆಚ್ಚಿದಂತೆ ಆದರೊಡನೆ ವ್ಯಕ್ತಿಗೆ ಹೊಂದಿಕೊಳ್ಳುವ ಸಾಧನೆಯು ಕಠಿಣವಾಗುತ್ತ ಬಂತು. ನಾನು ಸಿಕ್ಕಿಬಿದ್ದಿದ್ದೇನೆ, ಈಗ ಹೊಂದಿಕೊಳ್ಳುವದೆಂದರೇನು, ಎಂಬ ಪ್ರಶ್ನೆಯು ಅವನಲ್ಲಿ ಎದ್ದು ಕಾಡಿಸತೊಡಗಿತು. ಆದರೂ ಸಂಘಜೀವನವು ಅನಿವಾರ್ಯವಾಗಿಯೇ ಹೋಯಿತು. ಅದರ ಸಾಧನೆಗಳಲ್ಲಿ ಬಂದ ಸಂಕಟಗಳಿಗೆ ವೆಂಕಟರಮಣನು ನಿವಾರಕನಾಗಿ ಸುಖವನ್ನು ಕೊಡುತ್ತ ಬಂದನು. ಮುಂದೆ ನಾಗರಿಕತೆಯು ಬೆಳೆದಂತೆ ಮಾನವನ ಮನಸ್ಸಿನಲ್ಲಿಯೇ ಅನೇಕ ತನ್ನ ಲೋಪಗಳನ್ನು ಕುರಿತು ಎಚ್ಚರಿಕೆಯುದಯಿಸಿತು. ಅನೇಕ ಸಂದೇಹಗಳೆದ್ದವು. ಒಳವಂಗೆಗಳುಂಟಾದವು. ಅಲ್ಲಿಯೂ ಧರ್ಮದಿಂದಲೇ ಸಮಾಧಾನವು ದೊರೆಯಿತು. ಹೀಗೆ ವ್ಯಕ್ತಿಸಂಘಗಳು ಬೆಳೆದಂತೆ ಧರ್ಮದ ಉಪಯೋಗಗಳೂ ಬೆಳೆಯುತ್ತ ಹೋದವು. **ಸ್ವಾಸ್ಥ್ಯ, ಸುಖ, ಸಮಾಧಾನ** ಇವೇ ದೇವಧರ್ಮಗಳು ಮಾಡುತ್ತ ಹೋದ ಉಪಕಾರಗಳು.

**ಸ್ವಾಸ್ಥ್ಯಸುಖ ಸಮಾಧಾನಗಳು**

ಸುಖ ಪ್ರಿಯನಾದ ಜೀವಿಗೆ ಇವೇನು ಸಾಮಾನ್ಯವಾದ ಆಧಾರಗಳೋ? ಇವುಗಳು ಪ್ರಕೃತಿಯ ಒತ್ತಾಯಗಳು. ಆತನ ಇಂಥ ಸೃಷ್ಟಿಯನ್ನು ಯಾವ ವ್ಯಕ್ತಿಯು ಪೂಜಿಸುತ್ತ ಹೋದನೋ ಅವನಿಗೆ ಸಂಘದ

ಕಡೆಯಿಂದ ಸತ್ಕಾರವೂ ಬಂತು. ಅವನಿಂದ ಸಂಘಕ್ಕೆ ಉಪಕಾರ ವಾಗಲಿಲ್ಲವೆ? **ಉಪಕಾರಕ್ಕೆ ತಕ್ಕ ಸತ್ಕಾರವೂ ಸಹಜವೇ.** ಈ ಸತ್ಕಾರವು **ಈ** ಕೀರ್ತಿಯು ಒಂದು ಬಹು ದೊಡ್ಡ ಸುಖಗರ್ಭವು. ಇದರಲ್ಲಿ ಸ್ವಾಸ್ಥ್ಯಸುಖಸಮಾಧಾನಗಳು ಮೂರೂ ಇವೆ. ಇವುಗ ಳಿಂದಲೇ ಸತ್ಕಾರ. ಮತ್ತು ಸತ್ಕಾರದಿಂದಲೇ ಇವು. ದುಡ್ಡಿನಿಂದ ದುಡ್ಡು ಹೆಚ್ಚಿದಂತೆ. ಇಷ್ಟೇ ಅಲ್ಲ. ಅಂಥ **ಮಾನವು ತನ್ನ ನಿಜ ವಾದ ಯೋಗ್ಯತೆಯ ಪ್ರಮಾಣವೆಂದು ಮಾನವನು ಭಾವಿಸ ತೊಡಗಿದನು.** ಪ್ರತಿಯೊಬ್ಬನ ದೈವಭಕ್ತಿ ಧರ್ಮಗಳ ಪ್ರಮಾ ಣವು ಈಗ ಸಂಘದ ಅಭಿಪ್ರಾಯವನ್ನು ಅವಲಂಬಿಸಿಕೊಂಡು ಬಿಟ್ಟಿತು.

ಸತ್ಕಾರ

ತನ್ನೊಳಗಿನ ಸಮಾಧಾನಕ್ಕಿಂತಲೂ ಈ ಹೊರಗಿನ ಮಾನವೇ ಹೆಚ್ಚಿನ ವಿಷಯವಾಯಿತೀಗ. ದೇಹದ ಸುಖಕ್ಕಿಂತಲೂ ಮನಸ್ಸಿನ ಸಮಾಧಾನವು ಹೆಚ್ಚಿನದಾದುದರಿಂದ ಈ ಮಾನದ ಸಮಾ ಧಾನಕ್ಕಾಗಿ ಅನೇಕ ತೊಂದರೆಗಳನ್ನು ಸಹ ಮಾನವನು ಸಹಿಸ ತೊಡಗಿದನು. ಈಗ ಮಾನವನಿಗೆ ಒಂದು ಹೊಸ ವಿಷಯವು ಉಂಟಾ ಯಿತು. ಅದು ಈ ಸತ್ಕಾರ.

ಈ ಮಾನವು ಸ್ವಾಸ್ಥ್ಯಸುಖಸಮಾಧಾನಗಳ ಗರ್ಭವೆಂದು ಮೊದಲೇ ಹೇಳಿದೆಯಷ್ಟೆ? ಮೊದಲು ಇದು ಸಂಘಕ್ಕಾದ ಉಪಕಾರದಿಂದ ಹುಟ್ಟಿತು. ಇದನ್ನೇ ಸಂಘವೂ ಪಾರಿತೋಷಕವಾಗಿಟ್ಟಿತು. ಇದಕ್ಕಾಗಿ ದುಡಿ ಯುವದರಿಂದ ವ್ಯಕ್ತಿಗೂ ಸಂಘಕ್ಕೂ ಹಿತವಾಗಿಯೇ ತೀರಬೇಕು. ಆದರೆ ಅದು ಮೂಲ ಕಾರಣವನ್ನೇ ಅವಲಂಬಿಸಿಕೊಂಡಿದ್ದರೆ ಮಾತ್ರ. ಮುಂದೆ ಹಾಗಾಗಲಿಲ್ಲ. ಮಾನ್ಯರ ಮಕ್ಕಳೂ ಮಾನ್ಯರಾಗುತ್ತ ಬಂದರು. ಅವರ ಮನೆತನವೂ ಮಾನ್ಯವಾಯಿತು. ಈ ಸ್ಥಿತಿಯು ಉಂಟಾದಾಗಿನಿಂದ ಸೌಲಭ್ಯಪ್ರಿಯ ಮಾನವನು ಸುಲಭೋಪಾಯ ಗಳನ್ನೇ ಕೈಕೊಂಡನು. **ಸಂಘಕ್ಕೆ ಸ್ವಾಸ್ಥ್ಯಸುಖಸಮಾಧಾನ ಗಳನ್ನು ಕೊಡುವದಕ್ಕಾಗಿ ತಾನೇ ದುಡಿಯುವದಕ್ಕಿಂತ ಮಾನ್ಯರ ಜಾತಿ, ಗೋತ್ರ, ಸಹವಾಸ, ಪರಿಚಯಗಳ ಮೂಲಕ ಮಾನ ವನ್ನು ಪಡೆಯಲೆತ್ನಿಸತೊಡಗಿದನು.** ಇದರಿಂದ ಸಂಘಕ್ಕೆ ಹಿತ

ಕಾರಕವಾದ ಗುಣಗಳಿಗೆ ಪ್ರೋತ್ಸಾಹವು ಕಡಿಮೆಯಾಗಿ ಸಂಘಜೀವನಕ್ಕೆ ಬೇಕಾದ ಉಸಿರೇ ಕ್ರಮೇಣ ಇಲ್ಲದಂತಾಯಿತು. ಸಗರ್ಭ ಮಾನಕ್ಕಾಗಿ ಮಾಡತಕ್ಕ ಕರ್ತವ್ಯಗಳಿಗಿಂತಲೂ ಅಗರ್ಭ ಮಾನಕ್ಕೆ ಹಾನಿ ತಟ್ಟದಂತೆ ಅನೇಕ ಕ್ಷುದ್ರ ಕೃತ್ರಿಮ ಉಪಾಯಗಳೂ ಶಾಸನಗಳೂ ರಚಿಸಲ್ಪಟ್ಟವು. ಹೊಸ ಧರ್ಮವು ಏರ್ಪಟ್ಟಿತು. ಇದಕ್ಕೆ ಮೊದಲು ಚರ್ಚಿಸಿದ ಧರ್ಮವು ಪ್ರಕೃತಿಯ ಅವಸರ ಅವಶ್ಯಕತೆಗಳಿಂದ ಉಂಟಾದದ್ದು. ಅದರಲ್ಲಿ ಕುಂದುಕೊರತೆಗಳು ಕಂಡು

ಅತ್ಯಾಶೆ

ಬರುತ್ತವೆಯಾದರೂ, **ಅದು ಆ ಕಾಲದ ಸ್ಥಿತಿಗತಿಜ್ಞಾನ ಪರಿಮಿತಿಗಳನ್ನನುಸರಿಸಿ ಜೀವಿತವನ್ನು ಚನ್ನಾಗಿ ಸಾಂಗೋಪಾಂಗವಾಗಿ ನಡೆಸುವದಕ್ಕೆ ಅಗತ್ಯವಾಗಿತ್ತು.** ಆದರೆ ಈಗ ಚರ್ಚೆಗೆ ಬಂದ ಈ ಹೊಸ ಧರ್ಮದಲ್ಲಿ ಅವಸರಾವಶ್ಯಕತೆಗಳಿಲ್ಲ. **ಅತ್ಯಾಶೆಯೇ ವಿಶೇಷ.** ದುರಭಿಲಾಷೆಯೇ ಅದರ ಮೂಲ. ಅವಸರಾವಶ್ಯಕತೆಯ ಧರ್ಮದಲ್ಲಿ ಅನಿವಾರ್ಯ ಅಜ್ಞಾನದ ಪರಿಣಾಮಗಳಿವೆ; ಆದರೆ ಅತ್ಯಾಶೆಯ ಧರ್ಮದಲ್ಲಿ ನೈಚ್ಯವಿದೆ, ದೌಷ್ಟ್ಯವಿದೆ, ಠಮಾಳತನವಿದೆ, ಸಂಘದ್ರೋಹವಿದೆ. ಇದರಿಂದ ಹುಟ್ಟಿದ ಮಾನಾವಮಾನ ಸೂತ್ರಗಳು ಬಹು ನೀಚಸ್ವಾರ್ಥದ ಕಲ್ಪನೆಗಳು.

ಪ್ರಾಚೀನ ಮಾನವನ ಪ್ರಕೃತಿಯಿಂದೇರ್ಪಟ್ಟ ಧರ್ಮದಲ್ಲಿಯೇ ಅಜ್ಞಾನವಶಾತ್ ಎಷ್ಟೋ ಲೋಪಗಳಿವೆಯೆಂದು ಮೊದಲೇ ಹೇಳಿದೆಯಷ್ಟೆ. ಅಜ್ಞಾನವೆಂದು ಪ್ರಕೃತಿಯು ಸುಮ್ಮನಿರುತ್ತದೋ? ಸೃಷ್ಟಿಯಲ್ಲಿ ಕ್ರಿಯೆಗೆ ತಕ್ಕ ಪ್ರತಿಕ್ರಿಯೇ ಇದೆ. ಕಾರ್ಯಕ್ಕೆ ತಕ್ಕ ಫಲ ತಪ್ಪದೆ ಇದೆ. ಮುಂದಿನ ಜನಾಂಗವು ತನ್ನ ಅನುಭವದಿಂದ ಹಿಂದಿನವರ ಅನುಭವದ ಸೂತ್ರಗಳನ್ನೂ ಅವುಗಳ ಪರಿಣಾಮಗಳನ್ನೂ ನ್ಯಾಯವಾಗಿ ತಿದ್ದಬೇಕಾಗಿತ್ತು. ಆದರೆ ಅದು ಹಾಗೆ ಮಾಡುವದನ್ನು ಬಿಟ್ಟು ನೀಚ ವ್ಯಕ್ತಿತ್ವದ ಸಂಕುಚಿತ ಹಾದಿಯನ್ನು ಹಾಕಿದ್ದನ್ನು ನೋಡಿದರೆ, ಈ ಕಲ್ಪನಾಪಟುಗಳಷ್ಟು ಜಘನ್ಯಜಂತುಗಳು ಜಗತ್ತಿನಲ್ಲಿಯೇ ಇಲ್ಲವೆಂದು ಹೇಳಬೇಕಾಗುತ್ತದೆ. ದೇವಧರ್ಮಗಳ ಹಿಡಿತವು ಸಂಘಜೀವಿತದ ಮೇಲಿರುವದನ್ನು ಇವರು ಕಂಡುಹಿಡಿದು

ಅವುಗಳ ಹೆಸರಿನಲ್ಲಿ ಅವುಗಳ ಮುಸುಕಿನಲ್ಲಿ ತಮ್ಮ ಇಂದ್ರಜಾಲವನ್ನು ನಡೆಸಿದ್ದನ್ನು ನೋಡಿದರೆ ಲೋಕವೈರಿಗಳೆಂಬ ನಾಮಕ್ಕೆ ಇವರಷ್ಟು ಇನ್ನಾರೂ ಅರ್ಹರಲ್ಲವೆಂದು ತೋರುತ್ತದೆ. ಹೆಚ್ಚಿನ ದುರ್ದೈವವೆಲ್ಲಿದೆಯೆಂದರೆ ಇವರ ತರುವಾಯ ಬಂದ ಧರ್ಮಾಚಾರ್ಯರೂ ಕುರುಡುನಂಬಿಕೆಯಿಂದಲೋ ಸ್ವಾರ್ಥನಂಬಿಕೆಯಿಂದಲೋ ಆ ನೀಚ ಸಂಘವಿನಾಶಕ ಧರ್ಮಸೂತ್ರಗಳಿಗೆ ಟೀಕಾಭಾಷ್ಯಗಳನ್ನು ಬರೆದು ಅವನ್ನು ಸ್ಥಿರಪಡಿಸುತ್ತ ಹೋಗಿರುತ್ತಾರೆ. ಈ ರೋಗವು ಇಂದಿನವರೆಗೂ ಕಂಡುಬರುತ್ತಿದೆ.

ಸ್ವಾಸ್ಥ ಸುಖಸಮಾಧಾನಗಳಲ್ಲಿ ಸ್ವಾರ್ಥಪರಾರ್ಥಗಳೆರಡೂ ಇವೆ. ಸತ್ಕಾರವು ಪರಾರ್ಥವನ್ನು ಮಾಡಿದುದರ ಗುರುತು. ಸಂಘವು ಕಂಡುಕೊಂಡದ್ದು. ಸತ್ಕಾರವು ಪರಾರ್ಥದ ಫಲವು; ಆ ಸಂಘವು ಕೊಟ್ಟದ್ದು. ಆದರೆ ಸತ್ಕಾರ ಪ್ರೇಮಗಳಿಗೆ ಸಂಘದ ಗೊಡವೆಯೇ ಇಲ್ಲದಿದ್ದಾಗ ವ್ಯಕ್ತಿಯ ಧರ್ಮವೆಂದರೆ ಸ್ವಸುಖ, ಸ್ವಾರ್ಥವೇ. ಸಮಾಜವು ಹೇಗೋ ಹಾಳಾಗಿ ಹೋಗಲಿ! ತನ್ನ ಸುಖವೇ ಕಾರ್ಯಸ್ಫೂರ್ತಿ ಗಮ್ಯವಾದಲ್ಲಿ, ಆ ಸುಖದ ಬುಗ್ಗೆಯನ್ನು ಸುರಕ್ಷಿತವಾಗಿಟ್ಟುಕೊಳ್ಳುವದೇ ಒಂದು ದೊಡ್ಡ ಗಮ್ಯವಾಗುತ್ತದೆ. **ಅದನ್ನು ಹಾಗಿಟ್ಟುಕೊಳ್ಳಬೇಕಾದರೆ ಅದು ಅಧೀನವಾಗಿರುವದು ಮೇಲು. ಅಧೀನವಾಗಿಟ್ಟುಕೊಳ್ಳಬೇಕಾದರೆ ಆ ಸುಖಮೂಲಗಳಿಗೆ ಜ್ಞಾನಮಾನಾಭಿಮಾನಗಳು ಕೂಡದು.** ಯಾಕೆಂದರೆ ಇವು ಪರಾಧೀನತೆಯ ವೈರಿಗಳು. ಇವಕ್ಕವಕಾಶವು ದೊರಕಿತೆಂದರೆ ಸ್ವನಿರ್ಮಿತ ಯಜಮಾನರ ಸುಖಲಾಂಪಟ್ಯಕ್ಕೆ ಪಂಗುನಾಮವೇ ಮತ್ತೆ! ಇದಕ್ಕಾಗಿ ಮಹಾನುಭಾವರ ಧರ್ಮವೂ ಸಾಕಷ್ಟು ಬಂದೋಬಸ್ತು ಮಾಡಿಯೇ ಬಿಟ್ಟಿತು. ಅದು ಸ್ತ್ರೀಶೂದ್ರರ ಗುಲಾಮಗಿರಿ. ಅದು ಹೇಗೆ? **ಸ್ವಾರ್ಥವು ಸ್ವಾವಲಂಬಿಯುಲ್ಲ, ಪರಾವಲಂಬಿ.** ಅದಕ್ಕೆ ಬೇಕಾದ ಸುಖವು ದೈಹಿಕ ಸುಖ, ಇದನ್ನು ಕೊಡುವ ಸಮಾಜದ ಭಾಗವು ಯಾವದು? ಸ್ತ್ರೀ ಶೂದ್ರರು. ಆಹಾರವು ಸರಿಯಾಗಿ ಹೊಟ್ಟೆಗೆ ಬಿದ್ದು ಭಯವಿಲ್ಲದೆ ವಿಶ್ರಮಿಸಲಿಕ್ಕನುಕೂಲತೆಗಳಿದ್ದರೆ,

ಅತ್ಯಾಶೆಯ ರೀತಿನೀತಿಗಳು

ನಿದ್ದೆಯು ತಾನೇ ಬರಬೇಕು. ಈ ಆಹಾರ ಸಾಮುಗ್ರಿಗಳನ್ನು ಬೆಳೆಸುವವನು ಶೂದ್ರನು. ಬಟ್ಟೆ ಬರೆ ಮನೆಮಾರುಗಳಿಗೆ ಬೇಕಾದ ಸಾಮುಗ್ರಿಗಳನ್ನು ಒದಗಿಸಿ ಕೊಡುವವನು ಶೂದ್ರನು. ದನಕರು ಎತ್ತು ಎಮ್ಮೆಗಳನ್ನು ನೋಡಿಕೊಳ್ಳುವವನು ಶೂದ್ರನು. ಮನೆ ಮಠಗಳನ್ನು ಕಟ್ಟುವವನವನು. ಕಲ್ಲು ಕೆತ್ತಿ ದೇವರನ್ನೇ ಮಾಡುವವನವನು. ಆತನಿಗೆ ದೀಪಾರತಿ ನೈವೇದ್ಯಕ್ಕೆ ಬೇಕಾದ ವಸ್ತುಗಳನ್ನು ತರುವವನವನು. ಆತನ ಗುಡಿಯನ್ನೂ ಪೂಜಾರಿಯ ಮನೆ ಮಾರು ಸೊತ್ತುಗಳನ್ನೂ ಕಾವಲಾಗಿದ್ದು ಕಳ್ಳಕಾರರ ಭಯದಿಂದ ಕಾಪಾಡುವವನವನು. ಈ ರೀತಿ ತನ್ನ ಯಜಮಾನನನ್ನು ಚಿಂತೆಯಿಂದ ದೂರವಿಡುವವನು ಶೂದ್ರನು. ಮನೆಯೊಳಗಣ ವಸ್ತು ಒಡವೆಗಳನ್ನು ಚೊಕ್ಕಟವಾಗಿ ನೋಡಿಕೊಳ್ಳುವವಳು ಸ್ತ್ರೀ. ಅಡಿಗೆಯು ಅವಳ ಕೆಲಸ, ದೇವರಿಗೆ ಬೇಕಾದ ಬತ್ತಿಗಳನ್ನು ಹೊಸೆಯುವದು, ಎಣ್ಣೆಯನ್ನು ಹಾಕುವದು ಆಕೆಯ ಕೆಲಸ. ಮುಸರೆ ತಿಕ್ಕುವದು ಕಸ ಬಳಿಯುವದು ಆಕೆಯ ಕೆಲಸ. ಮನೆಯನ್ನೂ ಮಕ್ಕಳನ್ನೂ ಮುಟ್ಟಸಾಗಿಟ್ಟುಕೊಳ್ಳುವದು ಆಕೆಯ ಕೆಲಸ. ಗಂಡಸಿನ ಆಹಾರನಿದ್ರಾಮೈಥುನಗಳ ವ್ಯವಸ್ಥೆಯೂ ಆಕೆಯನ್ನವಲಂಬಿಸಿಕೊಂಡಿದೆ. ಶೂದ್ರನು 'ಆತನ ಮಕ್ಕಳಂ'ತೆ ಆದರೆ ಈ ಮಕ್ಕಳಿಗೆ ಆಸ್ತಿಯ ಹಕ್ಕು ಮಾತ್ರವಿಲ್ಲ! ಕಾಲಮಿತಿಕಾರ್ಯಕ್ರಮವಿಲ್ಲದೆ ದುಡಿಯುವದೇ ಸ್ತ್ರೀ ಶೂದ್ರರ ಧರ್ಮ. ಹಾಗೆಯೇ ಹೆಂಡತಿಯು ಅರ್ಧಾಂಗಿ, ಧರ್ಮಕಾರ್ಯಗಳಲ್ಲಿ ಸಹ-ಧರ್ಮಿಣಿ. ಮತ್ತೆಷ್ಟು ಸುಲಭವಾದ ಧರ್ಮವದು! ಗಂಡನ ಪಕ್ಕದಲ್ಲಿ ಕುಳಿತರಾಯಿತು, ಒಮ್ಮೊಮ್ಮೆ ಆತನ ಭುಜವನ್ನು ಮುಟ್ಟಿದರಾಯಿತು, ಆಕೆಯು ಧರ್ಮಪತ್ನಿಯೇ ಮತ್ತೆ! ಈ ಪತಿಯಲ್ಲಿಯೇ ಧರ್ಮದ ಚುಕ್ಕೆ ಚಿನ್ಹೆಯಾದರೂ ಇಲ್ಲವಾದರೂ ಆಕೆಯೇನೋ ಧರ್ಮಪತ್ನಿಯೇ! ಅದಕ್ಕಾಗಿ ಅಲಂಕಾರ ಆಭರಣಗಳು ಆಕೆಗೆ. ಅವುಗಳನ್ನೆತ್ತಿ ಯಾರಿಗಾದರೂ ಕೊಟ್ಟು ಬಿಡುವ ಅಧಿಕಾರವಾಗಲಿ, ಧೈರ್ಯವಾಗಲಿ ಯುಕ್ತಾಯುಕ್ತಪರಿಜ್ಞಾನವಾಗಲಿ ಆಕೆಗೆ ಇಲ್ಲದೆ

ಸ್ತ್ರೀ ಶೂದ್ರರ ಧರ್ಮ

ಹೋದರೂ ಆಕೆಯೇನೋ ಆ ಸೊತ್ತಿಗೆ ಯಜಮಾನತಿಯೇ!

ಸ್ತ್ರೀ ಶೂದ್ರರಿಬ್ಬರೂ ತಮ್ಮ ಯಜಮಾನರಿಗಾಗಿ ದುಡಿಯ ಬೇಕು. ಅದೇ ಅವರಿಗೆ ಧರ್ಮ. ಅದೇ ಇವರಿಬ್ಬರಿಗೂ ಸ್ವರ್ಗದ ಹಾದಿ. ಇಸ್ಲಾಮ ಮತದಲ್ಲಿ ಇವರಿಬ್ಬರಿಗೂ ತಕ್ಕ ಮಟ್ಟಿಗೆ ಇತರ ರೊಡನೆ ಸರಿಸಮಾನ ಪದವಿಯು ಕೊಡಲ್ಪಟ್ಟಿದೆ. ಸಂಘದ ('ಉಮ್. ತ್'ನ) ಅಭಿಮಾನವು ಇಸ್ಲಾಮ್‌ನಲ್ಲಿರುವಂತೆ ಇನ್ನಾವ ಮತದ ಲ್ಲಿಯೂ ಅಷ್ಟಾಗಿ ಕಾಣುವದಿಲ್ಲ. ಈ ಸಂಘದ ಅಭಿಮಾನವನ್ನು ಕಾಣಬೇಕಾದರೆ ಇಸ್ಲಾಮ್‌ನಲ್ಲಿಯೇ ಕಾಣಬೇಕು. ಅದಕ್ಕಾಗಿಯೇ ಅವರಲ್ಲಿ ಅನೇಕ ಪಂಗಡಗಳಿದ್ದರೂ ಒಕ್ಕಟ್ಟು ಹೆಚ್ಚಾಗಿದೆ. **ಸಂಘವ ನ್ನು ಬಿಟ್ಟು ವೈಯಕ್ತಿಕ ಲಾಭವು ಇಸ್ಲಾಮ್‌ನಲ್ಲಿ ಇಹದಲ್ಲಿಯೂ ಇಲ್ಲ. ಪರದಲ್ಲಿಯೂ ಇಲ್ಲ.** ಗುಲಾಮರು ಎಂಬ ಹೆಸರಿನವರು ಅವರಲ್ಲಿದ್ದರೂ ಇಸ್ಲಾಮ್ ಮತವು ಕೊಟ್ಟ ಆ ಗುಲಾಮರ ಹಕ್ಕು ಗಳನ್ನು ನೋಡಿದರೆ ನಮ್ಮ ಯಜಮಾನರ ಶೂದ್ರ 'ಮಕ್ಕಳಿ'ಗಿಂತ ಮತ್ತು 'ದೇವಿ, ಅರ್ಧಾಂಗಿ, ಗೃಹ ಲಕ್ಷ್ಮಿ'ಯರಿಗಿಂತ ಆ ಗುಲಾಮರ ಸ್ಥಿತಿಗತಿ ಮತ್ತು ಹಕ್ಕುಗಳು ಎಷ್ಟೋ ಹೆಚ್ಚಿನವಾಗಿವೆಯೆಂದು ಹೇಳಬಹುದು. ಆದುದರಿಂದಲೇ ಅವರಲ್ಲಿಯ ಗುಲಾಮರು ಸಹ ಘನತೆಗೇ ರಿದ್ದಾರೆ. ನಮ್ಮ ದೇಶದಲ್ಲಿ ಸುಲ್ತಾನ್ ಕುತ್‌ಬುದ್ದೀನ್ ನಿಂದ ಹಿಡಿದು ಬಲ್ಬನ್‌ನವರೆಗೆ ಐದು ತಲೆಗಳತನಕ ಗುಲಾಮರು ರಾಜ್ಯವನ್ನೇ ನಡೆಸಲಿಲ್ಲವೇ? ಕುತುಬ್‌ಮಿನ್‌ರ ಎಂಬ ಕಂಬವು ವಿಚಿತ್ರವಾದ ಅವರ ನಿಶಾನಿಯಾಗಿದೆ. ಅವರಲ್ಲಿ ರಜಿಯಾ ಎಂಬ ಒಬ್ಬ ರಾಣಿಯು ಸಹ ಇದ್ದಳು. ಮತ್ತು ಅಷ್ಟು ದೊಡ್ಡ ರಾಜ್ಯವನ್ನು, ಆದರಲ್ಲಿಯೂ ಒಂದು ಹೊಸ ದೇಶದಲ್ಲಿ ಅಪರಿಚಿತ ಜನಾಂಗದಲ್ಲಿ ಮತ್ತು ಅಷ್ಟು ಹಿಂದಿನ ಕಾಲದಲ್ಲಿ ನಡೆಸಿದ ಹೆಂಗಸು ಎಂದರೆ ಈ ಗುಲಾಮ ರಜಿಯಾ ರಾಣಿಯೇ. ಭರತ ವರ್ಷದಲ್ಲಿ ಸಂಸ್ಕೃತಿಯನ್ನು ಸರ್ವಾಂಗ ಸುಂದರವಾಗಿ ಬೆಳೆಸಿದ ಮೊಗಲರು ಸಹ ಮೊದಲಿನಿಂದ

ಇಸ್ಲಾಮ್‌ನಲ್ಲಿ ಸ್ತ್ರೀ ಶೂದ್ರರು

ದೊಡ್ಡ ಮನುಷ್ಯರಲ್ಲ. ಆದರೂ ಸುಂದರವಾದ ಹೂಹಣ್ಣುಗಳ ತೋಟವನ್ನು ಇಲ್ಲಿ ಮೊದಲು ನಿರ್ಮಿಸಿದವನು ಬಾಬರ್‌ನು. ದೆಹಲಿಯಿಂದ ಪೇಶಾವರದ ವರೆಗೆ ಉದ್ದಗಲ ಬೀದಿಯನ್ನು ಹಾಕಿದವನು ಸೂರ್ ಮನೆತನದ ಷೇರಷಾಃನು. ಜುಮಾಮಸೀದಿ, ಮೋತಿ ಮಶೀದಿ, ತಾಜ್‌ಮಹೆಲ್, ಗೋಲ್‌ಗುಮ್ಮಜ್ ಮುಂತಾದ ಕಟ್ಟಡಗಳನ್ನು ಕಟ್ಟಿ ಇಂದಿನ ವರೆಗೂ ಜಗತ್ತಿನ ಪ್ರಯಾಣಿಕರನ್ನು ಆಕರ್ಷಿಸಿದವರೆಂದರೆ ಈ ಮೊಟ್ಟಮೊದಲು ಸಾಮಾನ್ಯರೇ ಆದ ಮುಸ್ಲಿಮರೇ; ಅದರಲ್ಲಿಯೂ ತಾಜ್‌ಮಹೇಲ ಎಂಬದು ಒಬ್ಬ ಸ್ತ್ರೀಯಲ್ಲಿರುವ ಅವರ ಪ್ರೇಮದ ಚಿನ್ಹವು. ಅದರಲ್ಲಿ ವಿಶ್ರಮಿಸಿದ ವ್ಯಕ್ತಿಯೂ ಸಾಮಾನ್ಯ ಸ್ತ್ರೀಯಲ್ಲ. ಮೊಗಲ್ ರಾಜ್ಯದ ಲಗಾಮು ಆಕೆಯ ಕೈಯಲ್ಲಿತ್ತು. ಈ ಮೊಗಲ ಸಂಸ್ಕೃತಿಯಿಂದಲೇ ಮುಂದೆ ರಾಜಪುತ್ರ ಸಂಸ್ಕೃತಿ ಹುಟ್ಟಿತು. ಹೆಚ್ಚಾಗಿ ನಮ್ಮಲ್ಲಿ ಹೆಂಗಸರು ಅಂಥ ದೊಡ್ಡ ಜವಾಬ್ದಾರಿಯ ಕೆಲಸಗಳನ್ನು ವಹಿಸಿದ್ದೆಂದರೆ ಈ ಇಸ್ಲಾಮ್ ಸಂಸ್ಕೃತಿಯ ತರುವಾಯವೇ, ಅದರ ಮೇಲ್ಪಂಕ್ತಿಯಿಂದಲೇ. ಅದರಲ್ಲಿಯ ಗುಲಾಮ ಗೋಷಾಗಳಲ್ಲಿಂದ ಇಂಥ ವಿಚಿತ್ರ ವ್ಯಕ್ತಿ ಶಕ್ತಿಗಳು ಎದ್ದು ನಿಂತವೆಂದ ಮೇಲೆ ಅವರಲ್ಲಿಯ ಸ್ತ್ರೀ ಶೂದ್ರರ ಸ್ಥಿತಿ ಮತಿಗಳು ವಿಶೇಷವಾಗಿಯೇ ಇರಬೇಕಲ್ಲವೆ! ಹಿಂದುಗಳಲ್ಲಿಯೇ ಆಗಲಿ ಕ್ರೈಸ್ತ ಮುಂತಾದವರಲ್ಲಿಯೇ ಆಗಲಿ ಇವರ ಸ್ಥಿತಿಯು ಒಳ್ಳೇಗಿಲ್ಲ. ಹಾಗಿರುವದಾದರೂ ಹೇಗೆ? **ಮಾನಾಭಿಮಾನಗಳು ಇದ್ದಲ್ಲಿಯೇ ಅಲ್ಲವೆ ಸಂಸ್ಕೃತಿಯ ವಿಮಾನವೂ ಮೇಲಕ್ಕೇರುವದು?**

ಹೆಂಗಸಿಗೆ ಸನಾತನ ಧರ್ಮವು ಕೊಟ್ಟ ಮರ್ಯಾದೆಯು ಬರೀ ಗ್ರಂಥಗಳ ಮೂಲಕ ನೋಡಿದರೂ ಅದೊಂದು ವಾದಾಸ್ಪದವಾದ ವಿಷಯ. ಇನ್ನು ಅವರ ಸಾಮಾನ್ಯ ಇತಿಹಾಸವನ್ನೂ ಸ್ಥಿತಿಗತಿಗಳನ್ನೂ ನೋಡಿದರೆ ಮಾತ್ರ ಅಲ್ಲಲ್ಲಿ ಶ್ರುತಿಸ್ಮೃತಿಸೂತ್ರಗಳಲ್ಲಿರುವ ಮರ್ಯಾದೆಯು ಸೂತ್ರಗಳ ಗ್ರಂಥಗಳನ್ನು ಬಿಟ್ಟು ಬೈಲಿಗೆ ಬರಲಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹಿಂದೆಯೆಂದೋ ತಕ್ಕ ಮಟ್ಟಿಗಿದ್ದಿದ್ದರೂ ಮಧ್ಯಕಾಲದ

ಧರ್ಮವು ಮಾತ್ರ ಅವರನ್ನೆಂದಿಗೂ ಮಾನಾರ್ಹಮಾನವರೆಂದು ಸಹ ಗಣಿಸಲೇ ಇಲ್ಲ. ಶೂದ್ರನಿಗೆ ದಾಸ್ಯ ಒಂದೇ ಹೊರತಾಗಿ ಯಾವ ಧರ್ಮಕರ್ಮಗಳ ಅಧಿಕಾರವೂ ಇಲ್ಲ. ಹೆಂಗಸಿನ ಗತಿಯೋ–ಹೇಳಲಾಸಲ್ಲ! ಆಕೆಗೆ ಮೇಲಿನ ಮೂರು ವರ್ಣಗಳಲ್ಲಿ ಉಪನಯನ ಬ್ರಹ್ಮಚರ್ಯ ವಿದ್ಯಾರ್ಜನೆಯ ಅಧಿಕಾರಗಳಿವೆಯೆಂದು ಕೆಲವು ಆಧಾರಗಳಿವೆ. ಆದರೆ 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಇತ್ಯಾದಿ ಒಂದು ಕಡೆ ಗ್ರಂಥಬದ್ಧವಾಗಿ ಅಲ್ಲಲ್ಲಿ ಇದ್ದರೂ, ನಿಜವಾಗಿಯೂ ಆಕೆಯ ಸ್ಥಿತಿಯು ಕೆಟ್ಟ ಗುಲಾಮಗಿರಿಯದೇ, ಅದೂ ಮನುಮಹಾರಾಯನ ಬೋಧವನ್ನವಲಂಬಿಸಿಕೊಂಡೇ ಇದೆ:–

ಹಿಂದೂ ಸ್ತ್ರೀ

ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ಪುತ್ರೋ ರಕ್ಷತಿ ವಾರ್ಧಕ್ಯೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥

ತಂದೆ ಗಂಡ ಮಗ ಈ ಗಂಡು ಕಂಬಗಳನ್ನು ಬಿಟ್ಟರೆ ಈ ಪ್ರಾಣಿಗೆ ಸ್ವತಂತ್ರ ಜೀವನವೇ ಇಲ್ಲವಂತೆ! ಅದರಲ್ಲಿಯೂ "೩೦ ವರ್ಷದವನು ೧೨ ವರ್ಷದಾಕೆಯನ್ನು, ೨೪ ರವನು ೮ ವರ್ಷದಾಕೆಯನ್ನು ವರಿಸಬೇಕು'' ಎಂದು ಮನು ಕೊಟ್ಟ ಉಪದೇಶದಲ್ಲಿ ಆಕೆಗೆ ಸ್ವಾತಂತ್ರ್ಯವೇ ಏಕೆ, ವ್ಯಕ್ತಿತ್ವವು ಸಹ ಇಲ್ಲವೆಂದು ಭಾವಿಸಿದ ಹಾಗೇ ಆಯಿತು! ಯುವಕನೇ ಆಗಲಿ ಮುದುಕನೇ ಆಗಲಿ ಆಕೆಯ ವಯಸ್ಸು ಎಷ್ಟು ಚಿಕ್ಕದೇ ಇರಲಿ ಆಕೆಯ ದೇಹವು ಮಾತ್ರ ತಾನು ಅವಲಂಬಿಸಿರುವ ಗಂಡಸರ ಅಂಗಡಿ ಜೀನಸು! ಮಹಾಭಾರತದಲ್ಲಿ ಸಹ ಹೆಂಗಸರ ಈ ದುಃಸ್ಥಿತಿಯನ್ನು ಚನ್ನಾಗಿ ಕಾಣಬಹುದು. ಬ್ರಹಸ್ಪತಿ ದೀರ್ಘತಮಸ್ಸರ ಉಪಾಖ್ಯಾನವನ್ನೋದಿದರೆ ಸಾಕು. ಆ ಗಂಡಸರ ಗುಣವರ್ತನಗಳನ್ನು ನೋಡಿದರೆ ಬುದ್ಧಿಯೊಂದುಳ್ಳ ಯಾವ ಗಂಡಸಿಗೂ ನಾಚಿಕೆಯಾಗದಿರದು. ಆದರೂ ಅವರು ಋಷಿಗಳು! ಮಹಾನುಭಾವರು! ಮಾದರಿಗಳೇ ಹೀಗಾದರೆ ಅನುಯಾಯಿಗಳ ಗತಿಯೇನು? ಆ ಸಮಾಜದ ಗತಿಯೇನು? ಕೃಷ್ಣನು ಸಹ (ಅಥವಾ

ವ್ಯಾಸನೋ?) ಸ್ತ್ರೀ ಶೂದ್ರರಿಗೆ 'ಪಾಪಯೋನಿ § ಗಳೆಂದು ಹೆಸರಿಟ್ಟಿದ್ದಾನೆ. ಹೀಗಿರುವಾಗ ಆತನು ಆಡಿದ ಆಟ ಅವರ ಉದ್ಧಾರಕ್ಕಾಗಿಯೋ ಏನೋ! ಪಾಪ–ವೇದಾಧಿಕಾರವಿಲ್ಲದ ಪ್ರಾಣಿಗಳು! ಅವತಾರ ಪುರುಷನೊಡನೆಯೇ ಆಡುವ ಪಾಡುವ ಅಧಿಕಾರವಿದೆಯಂತೆ, ವೇದಾಧಿಕಾರವಿನ್ನು ಬರಲಿಲ್ಲವೇ? ಹಾಗಾದರೆ ದೇವರು ಹೆಚ್ಚೋ ವೇದವು ಹೆಚ್ಚೋ? ಇರಲಿ– ಪ್ರಶ್ನೆ ಯಾರು ಯಾರಿಗೆ ಕೇಳಬೇಕು? ಇಲ್ಲಿ ಏನೋ ಹೀಗಿದೆ. ಇನ್ನೊಂದು ಕಡೆ "ಉಚ್ಚ ಜಾತಿಯ ಹೆಂಗಸರು ಶೂದ್ರ ಸ್ಥಿತಿಯವರಲ್ಲ. ಶೂದ್ರ ಗರ್ಭದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಹುಟ್ಟಲಾರರು. ಅದಕ್ಕಾಗಿ ಅವರು ವೇದ ಸಂಸ್ಕಾರಗಳನ್ನು ಪಡೆಯಬೇಕು" * ಎಂದಿದೆ. ಹೀಗಿರುವಾಗ ಅವರು ಪಾಪಯೋನಿಗಳಾಗಲಾರರು ಹೇಗೆ? ಹಾಗೂ ಬ್ರಾಹ್ಮಣ ಕ್ಷತ್ರಿಯ ವೈಶ್ಯರು **ಹುಟ್ಟುವರು** ಹೇಗೆಂದು ಒಂದು ಸಂದೇಹ. ಯಾಕೆಂದರೆ "ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾತ್ ದ್ವಿಜ ಉಚ್ಯತೇ" ಎಂದಿನ್ನೊಂದು ಉಕ್ತಿ! ಯಾವದನ್ನವಲಂಬಿಸಬೇಕು? ಆದರೆ ಇಷ್ಟೇನೋ ನಿಜ; **ಸ್ತ್ರೀ ಶೂದ್ರರನ್ನು ಒಂದೇ ಕೌಂಸದಲ್ಲಿ ಎಷ್ಟೋ ಮತ ಗ್ರಂಥಗಳಲ್ಲಿ ಕಾಣಬಹುದು.**

ಇವರನ್ನು ಹಾಗಿಡಲಿಕ್ಕೆ ಮಾಡಿದ ಉಪಾಯಗಳನ್ನೂ ನೋಡಬೇಕು! ಚುರುಕುಬುದ್ಧಿಯ ಗಂಡಸಿನ ಅತ್ಯಾಶೆಯು ಮೋಸದ ಕೊನೆಯನ್ನು ಮುಟ್ಟಿದಂತೆ ತೋರುತ್ತದೆ! ಎಂತಹ ವಿಚಿತ್ರವಾದ ಉಪದೇಶಗಳು! ಮರಣಾನಂತರದ ಬಹುಮಾನ ಪಾರಿತೋಷಕಗಳು! ತಪ್ಪುಗಳು ಒಂದೇ ಆದಾಗ್ಯೂ ಬ್ರಾಹ್ಮಣನಿಗೆ ಒಂದು ದಂಡನೆಯಾದರೆ ಶೂದ್ರನಿಗೆ § ಇನ್ನೊಂದು. ಒಂದು ಮೃದು ಇನ್ನೊಂದು

---

§ ೯ನೇ ಅಧ್ಯಾಯ ೩೨ ಭಗವದ್ಗೀತೆ

* ನಶೂದ್ರ ಸಮಾಃ ಸ್ತ್ರೀಯಾಃ। ನಹಿ ಶೂದ್ರಯೋನೌ ಬ್ರಾಹ್ಮಣ ಕ್ಷತ್ರಿಯಾ ವೈಶ್ಯಾಃ ಜಾಯಂತೇ। ತಸ್ಮಾಚ್ಛಂದಸಾ ಸ್ತ್ರೀಯಃ ಸಂಸ್ಕಾರ್ಯಾಃ ॥ (ಹರಿತ ೧೧. ೨೦)

§ ಯಾಜ್ಞವಲ್ಕ್ಯ, ಮನು, ಪರಾಶರ ಇತ್ಯಾದಿ ಎಲ್ಲ ಸ್ಮೃತಿಗಳಲ್ಲಿಯೂ ಈ ವಿಷಯುವನ್ನು ಧಾರಾಳವಾಗಿ ಕಾಣಬಹುದು.

ಘೋರವಾದದ್ದು! ನಮ್ಮಲ್ಲಿ ಶೂದ್ರರನ್ನೂ ಪಂಚಮ ಮುಂತಾದವರನ್ನೂ 'ಗುಲಾಮರು' 'ದಾಸರು' ಎಂದು ಕರೆಯುವ ರೂಢಿ ಮಾತ್ರ ಇಲ್ಲ. ಆದರೆ, ಅಷ್ಟರಿಂದ ನಾವು ದೊಡ್ಡ ಮನುಷ್ಯರೆಂದೆನ್ನಲಿಕ್ಕಾಗುವದಿಲ್ಲ. ನಿಜವಾಗಿ ಅವರು ಗುಲಾಮರೇ. ಶೂದ್ರರ ಕರ್ತವ್ಯವು ಮೇಲಿನ ಮೂರು ವರ್ಣಗಳ ಸೇವೆ ಮಾಡುತ್ತಿರುವದು* ಯಾಕೆಂದರೆ ಅವರು ಬ್ರಹ್ಮನ (ಪುರುಷನ) ಪಾದದಿಂದ ಹುಟ್ಟಿದ್ದಾರೆ! ಅವರ ಪದವಿಯು ಹೇಗಿತ್ತೆಂಬದು ಅವತಾರ ಪುರುಷನಾದ ರಾಮಚಂದ್ರನನ್ನು ನೋಡಿದರೆ ತಿಳಿಯುತ್ತದೆ. ರಾಮಚಂದ್ರನೇ ಶೂದ್ರ ತಪಸ್ವಿಯನ್ನು ಕೊಂದುಬಿಡುತ್ತಾನೆ! ಶೂದ್ರನಿಗೆ ಉಚ್ಚ ಮಾನವನ ಪಾದಸೇವೆಯನ್ನು ಬಿಟ್ಟು ಭಗವಂತನ ಪಾದಸನ್ನಿಧಿಯನ್ನು ಕೋರುವ ಅಭಿಲಾಷೆಯೋ! ಎಂಥ ಅಧರ್ಮವಿದು! ಅಧಿಕಾರವಿಲ್ಲದೆ ಮಾಡಿದ ಕೆಲಸ ಅಧಿಕಪ್ರಸಂಗವೇ ಅಲ್ಲವೇ? ಆದರೆ ಇಲ್ಲಿ ಒಂದು ಸಂದೇಹ- ದೇವರಿಗೆ ಮೊರೆಯಿಟ್ಟವನನ್ನು ದೇವರೇ ಕೊಲ್ಲುವದೇ? ಅದಕ್ಕೆ ಸಮಾಧಾನವೇನೆಂದರೆ ದೇವರ ಕೈಯಿಂದ ಸಾಯುವದೆಂದರೆ ನೆಟ್ಟಗೆ ವೈಕುಂಠಕ್ಕೇ ಹೋಗುವದು!! ಕ್ರೈಸ್ತ, ಮುಸಲಮಾನ ಮುಂತಾದವರಲ್ಲಿಯೂ ಈ ಗುಲಾಮಗಿರಿಗೆ ಧಾರಾಳವಾದ ಆಧಾರವಿದೆ.

**ಗುಲಾಮಗಿರಿ, ಕ್ರೈಸ್ತರು ಮತ್ತು ನಾಸ್ತಿಕರು**

ಕ್ರೈಸ್ತ ಧರ್ಮಗುರುವಾದ ದೊಡ್ಡ ಸೈಂಟ ಗ್ರೆಗರಿ ಪೋಪ್‌ನ ಭೂಮಿಗಳನ್ನೇ ವ್ಯವಸಾಯಮಾಡುವದಕ್ಕೆ ಸಾವಿರಾರು ಗುಲಾಮರಿದ್ದರು. ಮುಂದೆ ತಪ್ಪಿಸಿಕೊಂಡು ಹೋದ ತನ್ನ ತಮ್ಮನ ಗುಲಾಮನನ್ನೂ ಆತನ ಹೆಂಡತಿ ಮಕ್ಕಳನ್ನೂ ಮತ್ತೆ ಹಿಡಿಯುವದಕ್ಕಾಗಿ ಆತನು ಮಾಡಿದ ಪ್ರಯತ್ನಗಳು ಆತನ ಒಂದು ಪತ್ರದಿಂದ ಗೊತ್ತಾಗುತ್ತವೆ. ಸೈಂಟ್ ಥೊಮಸ್ ಎಕ್ವಿನಸ್‌ನು ಗುಲಾಮಗಿರಿಯು ಮೂಢ ಧರ್ಮಕ್ಕೆ ವಿರುದ್ಧವಾಗಿದ್ದರೂ ಅದು ಧರ್ಮಪ್ರಚಾರಕ್ಕೆ ಅನುಕೂಲವಾಗಿರುವದರಿಂದ ಅದನ್ನೊಂದು ಬಿಡಲಾರದ ಅವಸರವೆಂದು ಭಾವಿ

* ಋಗ್ವೇದ ೧೦ ೯೦–೧೨ ಮನುಸ್ಮೃತಿ ೧. ೮೭, ೯೧ ಇವುಗಳು ಶೂದ್ರನ ಧರ್ಮವನ್ನು ತೋರಿಸುತ್ತವೆ.

ಸಬೇಕೆನ್ನುತ್ತಾನೆ. 'ಕೆನನ್ ಲಾ' ಪ್ರಕಾರ ಗುಲಾಮಗಿರಿಯನ್ನು ಇಟ್ಟುಕೊಳ್ಳುವದು ನ್ಯಾಯ. ಅಷ್ಟೇ ಅಲ್ಲ- ಅದನ್ನು ಬಲಾತ್ಕಾರದಿಂದ ಸಾಗಿಸುವದು ಸಹ ಅನ್ಯಾಯವಲ್ಲ. ಚರ್ಚಿನ ಗುಲಾಮರಿಗೆ ಬಿಡುಗಡೆ ಕೊಟ್ಟದ್ದಕ್ಕಾಗಿ ಎಷ್ಟೋ ಬಿಷಪ್‌ರನ್ನು ತೆಗೆದುಹಾಕಿದ್ದನ್ನು ಆ ಧರ್ಮದ ಇತಿಹಾಸದಲ್ಲಿ ಕಾಣಬಹುದು. ಥಿಯೋಡರ್ ಆಫ್ ಚಾರ್ಲ್ಸ್‌ನು ಕೆನ್ಟರ್‌ಬರಿಯ ಆರ್ಚ್‌ಬಿಷಪ್‌ನಾದಾಗ ಗ್ರೀಕ ಪಾದ್ರಿಗಳು ಗುಲಾಮರನ್ನು ಇಟ್ಟುಕೊಳ್ಳುವದಿಲ್ಲ, ರೋಮನ್ ಪಾದ್ರಿಗಳು ಅವರನ್ನು ಧಾರಾಳವಾಗಿಟ್ಟುಕೊಂಡಿದ್ದಾರೆ.§ ಎಂದು ಬರೆದನು. ನಿಜವಾಗಿಯೂ ಗುಲಾಮಗಿರಿಯನ್ನು ಮೊದಲು ನಿರ್ಮೂಲಮಾಡಿದವರೆಂದರೆ ನಾಸ್ತಿಕರು ದೇವದ್ರೋಹಿಗಳೆಂದು ಅಪಕೀರ್ತಿಯನ್ನು ಪಡೆದ ಫ್ರಾನ್ಸ್‌ದ ಪರಿವೃತ್ತಿಕಾರರು (೧೭೯೪ ರಲ್ಲಿ); ಅಲ್ಲದೆ ಕ್ರೈಸ್ತರಲ್ಲ. 'ಧರ್ಮಸಂರಕ್ಷಕ * ನಾದ ೩ನೆಯ ಜೋರ್ಜನು ಗುಲಾಮರನ್ನು ಬಿಡುವ ವಿಷಯದಲ್ಲಿ ಪೂರ್ತಿಯಾಗಿ ವಿರುದ್ಧನಾಗಿದ್ದನು. ಆಗ ಗುಲಾಮರ ವ್ಯಾಪಾರ ಧಾರಾಳವಾಗಿತ್ತು. ಅದು ಕ್ರಿಸ್ತಶಕದ ೧೮೦೭ನೇ ಇಸವಿಯಲ್ಲಿ ಒಂದು ಹೊಸ ಶಾಸನದಿಂದ ನಿಲ್ಲಿಸಲ್ಪಟ್ಟಿತು. ಅಮೇರಿಕದ ಕ್ರೈಸ್ತ ಸಂಸ್ಥಾನಗಳಲ್ಲಿ ಗುಲಾಮ ವ್ಯಾಪಾರವು ನಿಂತು ಮುಕ್ಕಾಲು ಶತಮಾನ ಇನ್ನೂ ಆಗಲಿಲ್ಲ. ಅವರ ಧರ್ಮದ ಒಂದು ದೃಷ್ಟಾಂತ! 'ದೇವರ ಆಶೀರ್ವಾದದಿಂದ' ಗುಲಾಮರನ್ನು ಹಿಡಿದು ತರಲಿಕ್ಕೆ ಪಶ್ಚಿಮ ಆಫ್ರಿಕಕ್ಕೆ ಹೊಸ ಹಡಗವನ್ನು ಹಾಕಿ ೧೫೬೧ರಲ್ಲಿ ತೆರಳಿದ ಜೊನ್ ಹೊಕಿನ್ಸನು ದೇವಧರ್ಮಗಳಲ್ಲಿ ಬಹು ಭಕ್ತಿಯುಳ್ಳ ವ್ಯಕ್ತಿಯೇ. ಆತನು ತನ್ನ ಹಡಗಕ್ಕೆ 'ಜೀಸಸ್' (ಯೇಸು) ಎಂಬ ಹೆಸರಿನ್ನಿಟ್ಟುಕೊಂಡಿದ್ದನು! ದೇವರ ರಾಜ್ಯವು ಬರಲಿ ಎಂದು ಅಟ್ಟಹಾಸದಿಂದ ಪ್ರಾರ್ಥಿಸಿಯೇ ಆತನು ಈ ಘನಕಾರ್ಯಕ್ಕಾಗಿ ಹೊರಟನು! ನಿಗ್ರೋ ಜನರ ಗುಲಾಮಗಿರಿಯು ಎಲ್ಲ ಕ್ರೈಸ್ತ ಪಾದ್ರಿಗಳಿಗೂ ಸಮ್ಮತವಾಗಿತ್ತು! ಅಮೇರಿಕದಲ್ಲಿ ಅದಕ್ಕೆ ಮೊದಲು ಇದಿರಾದವನು

§ Social Life in Britain from the Conquest to the Reformation page 336.

* ಜೋರ್ಜನಿಗೆ ಕ್ರೈಸ್ತ ಧರ್ಮಮಠಗಳಿಂದ ಸಿಕ್ಕಿದ ಬಿರುದಿದು.

ಥೊಮಸ್ ಪೇನ್‌ನು. ಈತನು ನಾಸ್ತಿಕನು, ಧರ್ಮಲಂಡನು! ಆದರೆ ಇವನೇ ನಿಜವಾದ ಈ ಧರ್ಮಕಾರ್ಯವನ್ನು ಮಾಡಿದನು. ಇನ್ನೊಬ್ಬನು ಎಬ್ರಹಮ್ ಲಿಂಕನ್‌ನು. ಈತನು ಆಸ್ತಿಕನಾಗಿದ್ದನು ತಕ್ಕಮಟ್ಟಿಗೆ. ಆದರೂ ಪಾದ್ರಿಗಳ ಆಚಾರವಿಚಾರಗಳಿಗೆ ಸಾಷ್ಟಾಂಗವನ್ನು ಹಾಕುವವನಾಗಿರಲಿಲ್ಲ. ಪಾದ್ರಿಗಳು ಗುಲಾಮರನ್ನು ಯಂತ್ರದಂತೆ ಕೆಲಸಕ್ಕೆ ಹಾಕುತ್ತಿದ್ದರು, ಬಡೆಯುತ್ತಿದ್ದರು, ಕಾಡಿಸುತ್ತಿದ್ದರು, ಮನಸ್ಸಿಗೆ ಬಂದಂತೆ ಮಾರುತ್ತಿದ್ದರು ಕೊಂಡುಕೊಳ್ಳುತ್ತಿದ್ದರು! ಈಗ ಅಮೇರಿಕದಲ್ಲಿ 'ಲಿಂಚ್' § ಮಾಡುವವರೂ ಕ್ರೈಸ್ತರೆ. ದಕ್ಷಿಣ ಆಫ್ರಿಕದಲ್ಲಿ ಕೂಲಿಕಾರರನ್ನು ಹಿಂಸಿಸುವರೂ ಕ್ರೈಸ್ತರೇ. * **ನಾಸ್ತಿಕರೆಂದು ನಿಂದಿಸಲ್ಪಟ್ಟು ಹೀಯಾಳಿಸಲ್ಪಟ್ಟು ಬಹಿಷ್ಕರಿಸಲ್ಪಟ್ಟವರಿಂದಲೇ ಗುಲಾಮಗಿರಿಯು ಕಡಿಮೆಯಾಗುತ್ತ ಬಂತು.** ಅವರ ಅಧರ್ಮ ಉಪದೇಶಗಳಿಂದ ಜನಸಾಮಾನ್ಯದ ಭಕ್ತಿಯು ಕೆಟ್ಟಿತು. 'ಧರ್ಮಬುದ್ಧಿಯು ಹಾಳಾಯಿತು.' ಆದರೆ ಅದರಿಂದ ಸಾವಿರಾರು ಜನರಿಗೆ ಗುಲಾಮಗಿರಿಯೂ ತಪ್ಪಿತು. ನೀಚ ಪಶುಜೀವನದಿಂದ ಮುಕ್ತಿಯಾಯಿತು.

ಕುರಾನ್‌ನಲ್ಲಿಯೂ ಸ್ತ್ರೀಶೂದ್ರರ ಪದವಿಯು ನಮ್ಮಲ್ಲಿಗಿಂತ ಹೆಚ್ಚಿನದಾಗಿದ್ದರೂ ಗುಲಾಮರಿಗೆ ಸಾಕಷ್ಟು ಆಧಾರವಿದೆ. ಪುರಾಣಗಳಲ್ಲಿಯೂ (ಶುಭನಾಮಗಳಿಂದ) ಎಷ್ಟೋ ಆಧಾರವಿದೆ. ಆಚರಣದಲ್ಲಂತೂ ಧಾರಾಳವಾಗಿಯೇ ಇದೆ. ಪಶುಪಕ್ಷಿಗಳಿಗೆ ಹೇಗೆ ತಮ್ಮ

§ Lynch ಅಮೇರಿಕದಲ್ಲಿ ನಿಗ್ರೋ ಜನರನ್ನು ಕೆಲವರು ಮನಸ್ಸು ಬಂದಂತೆ ಕೊಲ್ಲುತ್ತಾರೆ. ತುಪಾಕಿಯಿಂದ ಹೊಡೆಯುವದು, ಗಲ್ಲಿಗೆ ಹಾಕುವದು, ಬಿಸಿಬಿಸಿ ಟಾರ್, ಎಣ್ಣೆ ಹಾಕಿ ಸುಡುವದು— ಇವು ಅವರ ಕೊಲ್ಲುವ ಕ್ರೂರ ರೀತಿಗಳಲ್ಲಿ ಹಲಕೆಲವು ಮಾತ್ರ. ಹೀಗೆ ಮಾಡುವವರಲ್ಲಿ ಚರ್ಚ್‌ಗೆ ಹೋಗುವ ಆಸ್ತಿಕರೇ ವಿಶೇಷ. ಭೌತಿಕರೂ ಹೈತುಕರೂ ಇಂಥ ಕ್ರೂರ ಅನ್ಯಾಯಗಳಿಗೆಲ್ಲೆಲ್ಲಿಯೂ ವಿರುದ್ಧರೇ. ಆದರೆ ಇದು ಅಲ್ಲಿಯ ಸರ್ವಸಾಮಾನ್ಯ ನಾಗರಿಕರ ರೀತಿಯಲ್ಲ.

* 'ಚಾ' ತೋಟಗಳಲ್ಲಿ ಕೂಲಿಕಾರರು ಮಾಡುವ ಹಿಂಸೆಯೂ ಬಹು ಕ್ರೂರವಾಗಿದೆ. ಅದನ್ನು ಕೊಡುವವರೂ ದೇವಧರ್ಮಗಳಲ್ಲಿ ನಂಬಿಕೆಯುಳ್ಳವರೇ; ಪಾಶ್ಚಿಮಾತ್ಯರೇ ಮತ್ತು ಅವರ ಕೈಕೆಳಗಿನ ಪೌರ್ವಾತ್ಯರು.

ವಿಕಾಸಕ್ಕಾಗಿ ಧರ್ಮವೆಂಬದಿಲ್ಲವೋ ಹಾಗೆಯೇ ಶೂದ್ರನಿಗೂ. ಇಬ್ಬರೂ ಒಂದೆಯೋ ಎಂದು ಕೇಳಿದರೆ ಆತನು ಈ ಅವಮಾನಕ್ಕೆಂದೂ ಒಪ್ಪಲಾರನು. ತನಗೆ- ಮಾನವನಿಗೆ- ಧರ್ಮವೆಂಬದೊಂದು ವಿಶೇಷವಾಗಿದೆಂದೆನ್ನುವನು. ಈ ಧರ್ಮವನ್ನು ತನ್ನಲ್ಲಿ ಸ್ಥಾಪಿಸುವದಕ್ಕಾಗಿ ಅನ್ನಪ್ರಾಶನದಿಂದ ಪಿಂಡಪ್ರಾಶನದ ವರೆಗೆ ಆತನೆಷ್ಟೋ ಸಂಸ್ಕಾರಗಳನ್ನು ನಿರ್ಮಿಸಿಟ್ಟಿದ್ದಾನೆ. **ಈ ಸಂಸ್ಕಾರಗಳು, ಧರ್ಮಕರ್ಮಗಳು ಶೂದ್ರನಿಗೆ ಮಾತ್ರವಿಲ್ಲ!** 'ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತಿ' § ಎಂದು ಮನುವು ಹೇಳಿಬಿಟ್ಟಿದ್ದಾನೆ! ಸನಾತನ ವರ್ಣಾಶ್ರಮ ಧರ್ಮಕ್ಕೆ ಸೇರಿದ ಶೂದ್ರನ ಗತಿ ಎಂದರೆ ಇದು. ಬರೀ ಪಶುವಿನಂತೆ ಬಾಳುವದರಿಂದ ಆತನಿಗೆ ವಿದ್ಯೆ ಇಲ್ಲದಂತಾಯಿತು. ಆತನ ದಾರಿದ್ರ್ಯಕ್ಕೆ ಎಣೆಯಿಲ್ಲದಂತಾಯಿತು. ಆತನಿಗೆ ತನ್ನ ದೇಹವನ್ನು ಶುಚಿಯಾಗಿಟ್ಟುಕೊಳ್ಳುವದು ಹೇಗೆ, ತನ್ನ ಮನಸ್ಸನ್ನು ಸುಖವಾಗಿ ಅರಳಿಸುವದು ಹೇಗೆ, ಇವೇ ಮುಂತಾದ ಬಾಳಿಗೆ ಬೇಕಾದ ಅತ್ಯಗತ್ಯ ವಿಷಯಗಳನ್ನು ಸಹ ತಿಳಕೊಳ್ಳುವ ಯೋಗ್ಯತೆಯಿಲ್ಲದಂತಾಯಿತು. ಹೆಚ್ಚೇಕೆ- ಶೂದ್ರನಿಗೆ ಇಲ್ಲಿಯೇ ನರಕವಾಯಿತು!

ಶೂದ್ರನೂ
ವರ್ಣಾಶ್ರಮ ಧರ್ಮವೂ

ಬುದ್ಧನ ಮತವು ಉದಯಿಸುವ ವರೆಗೆ ಶೂದ್ರರೂ ಸ್ತ್ರೀಯರೂ ಬ್ರಾಹ್ಮಣ ಕ್ಷತ್ರಿಯರ ವೈಶ್ಯರ ಅತ್ಯಾಶೆಯ ಆಹುತಿಗಳೇ ಆಗಿದ್ದರು. ಬುದ್ಧನು ಭೇದಗಳ ವೈರಿಯಾದನು. ಸಮಾನತೆಯು ಪ್ರತಿ ವ್ಯಕ್ತಿಯ ಅಧಿಕಾರವೆಂಬದನ್ನು ಸಾರಿದನು. ಕೃತ್ರಿಮ ಜಾತಿ ರೀತಿಗಳನ್ನು ಬಡೆದು ಬಗ್ಗಿಸಿದನು. ಜೀವಿಗೆ ದುಃಖವು ಬೇಡವಾಗಿದೆ. ಅದು ಯಾವ ಕಾರಣದಿಂದಲೇ ಆಗಲಿ ಬಂದರೆ ಉಚ್ಚನೀಚ ಜಾತಿ ಕುಲಭೇದವನ್ನು ಲೆಕ್ಕಿಸದೆ ಅದನ್ನು ಕಿತ್ತೊಗೆಯುವ ಸಮಾಜಸೇವೆಯೇ, ಉತ್ತಮವಾದ ವ್ಯವಹಾರವೆಂದು ಆಡಿ ಮಾಡಿ ತೋರಿಸಿದನು. ಇದರಿಂದ ವರ್ಣಾ

ದಲಿತರೂ ಧಮ್ಮ ಪದವೂ

§ ಮನು ಭಾಗ ೧೦-೧೨೬

ಶ್ರಮ ಧರ್ಮಕ್ಕೂ ಬೌದ್ಧ ಮತಕ್ಕೂ ಅಜಗಜಾಂತರವುಂಟಾಯಿತು. ಅದು ಭೇದಗಳನ್ನಿಟ್ಟುಕೊಂಡು ಬೆಳೆಸುವ ಸಂಪ್ರದಾಯ. ಇದು ಅದಕ್ಕೆ ವಿರುದ್ಧ. ಅಲ್ಲಿ ಹುಟ್ಟಿದವನು ಅಲ್ಲಿಯೇ ಇದ್ದು ಸಾಯ ಬೇಕು. ಇದು ಸಕಲರಿಗೂ ಜೀವಿತದ ಉಚ್ಚ ಸುಖ ಸೋಪಾನ ವನ್ನೇರುವ ಅಧಿಕಾರವನ್ನು ಕೊಡುತ್ತದೆ. ಅದು ದೇವ ಬ್ರಾಹ್ಮಣ ವೇದಶಾಸ್ತ್ರಗಳನ್ನವಲಂಬಿಸಿಕೊಂಡಿದೆ. ದೇವರು ಸರ್ವೋತ್ತಮನು, ಜಗದೀಶನು; ಬ್ರಾಹ್ಮಣನೇ ಆತನನ್ನು ತಿಳಿದವನು, ತಿಳಿಸಲರ್ಹನು; ವೇದಶಾಸ್ತ್ರಗಳು ಮಾತ್ರವೇ ದೇವರನ್ನು ಪ್ರತಿಬಿಂಬಿಸುವ ಕನ್ನಡಿ; ಸಮಾಜವನ್ನು ಸುಖದಲ್ಲಿಡುವ ನಡೆನುಡಿಗಳ ಉಪದೇಶ ಭಾಂಡಾರ ದ್ವಿಜರ ಅಧಿಕಾರ. ಬ್ರಾಹ್ಮಣರನ್ನು ಬಿಟ್ಟರೆ ಇಹಪರಗಳನ್ನು ಸಂಧಿ ಸುವ ಸೇತು ಬೇರೊಂದಿಲ್ಲ. ಅದಕ್ಕಾಗಿ ಅವರು ಭೂಸುರರು. ಆದರೆ ಬುದ್ಧನಿಗೆ ಇದೆಲ್ಲ ಠಕ್ಕಿನ ಬಾಜಾರವೆಂಬದೇ ಮನವರಿಕೆ. ಆತನು ದೇವರನ್ನೇ ಮೊದಲು ಬಹಿಷ್ಕರಿಸಿ ಬಿಟ್ಟನು. ಆ ದೇವರೇ ಹೋದ ಮೇಲೆ ಉಚ್ಚನೀಚಭೇದ ಮೂಲವಾದ ಆತನ ಮಂತ್ರ ತಂತ್ರೋ ಪದೇಶಗಳಿಗೆ ಜಾಗೆಯೆಲ್ಲಿದೆ? ಜಗತ್ತಿನ ಕಲ್ಯಾಣಕ್ಕಾಗಿ ಎಂದಲ್ಲವೆ ಬ್ರಾಹ್ಮಣರು ದೇವರನ್ನು ಸ್ವರ್ಗಕ್ಕೇರಿಸಿದ್ದು? **ಆ ಕಲ್ಯಾಣವನ್ನು ತಮ್ಮ ತಮ್ಮ ಬುದ್ಧಿ ಹೃದಯ ಕೈಕಾಲುಗಳಿಂದಲೇ ದುಃಖ ಪೀಡಿತರಿಗೆ ನೇರವಾಗಿ ಸೇವಾತತ್ಪರತೆಯಿಂದ ಮಾಡಿದರಾ ಯಿತು- ಎಂದು ಬುದ್ಧನ ಅಭಿಪ್ರಾಯ.** ಈ ಉಪದೇಶವು ವರ್ಣಾಶ್ರಮ ಧರ್ಮದಿಂದ ನರಕವನ್ನು ಇಲ್ಲಿಯೇ ಕಾಣುತ್ತಿದ್ದವ ರೆಲ್ಲರಿಗೂ ಕೈವಾರಿಯಾಗಿ ಬಂತು. ಆದುದರಿಂದ ಶೂದ್ರರು ಗುಂಪು ಗುಂಪಾಗಿ ಬೌದ್ಧ ಮತವನ್ನು ಸ್ವೀಕರಿಸಿದರು. ಅನೇಕರು ಬಹು ದೊಡ್ಡ ಸ್ಥಿತಿಗೆ ಬಂದು ಬುದ್ಧನ ಮತವನ್ನು ಉಪದೇಶಿಸುತ್ತ ಹೋದರು. ಸಂಘಗಳನ್ನು ಸ್ಥಾಪಿಸಿದರು. ಗ್ರಂಥಗಳನ್ನು ಬರೆ ದರು. ಅತ್ಯದ್ಭುತ ದಲಿತೋದ್ಧಾರಕ ಪತಿತೋದ್ಧಾರಕ ಸೇವೆಯನ್ನು ಮಾಡಿದರು. ಈ ಪ್ರಕಾರವಾದ ವ್ಯವಹಾರವು ಜನಸಮುದಾಯದ

ಮನಸ್ಸಿಗೆ ಬಂತು. ಸಾವಿರಾರು ಜನರು ವರ್ಣಾಶ್ರಮ ಧರ್ಮವನ್ನ ಗಲಿ ಬುದ್ಧನ ಅನುಯಾಯಿಗಳಾದರು. ಮನಸ್ಸಿನ ಬಂಧನವು ಹರಿಯಿತು. ಸಾಮಾಜಿಕ ದಾಸ್ಯವು ಹರಿಯಿತು. **ಮನಸ್ಸು ಬಿಡುಗಡೆಯನ್ನು ಹೊಂದಿತು. ಎಂದರೆ ಸುಖ ಪ್ರಗತಿಗಳಿಗೆ ವೈರಿಯಾದ ನೈಚ್ಯಾನುಸಂಧಾನವು ಹೋಯಿತು. ಹೊಸ ಯುಗವೇ ಮೂಡಿತು.** ಒಮ್ಮೆ ದಾಸಾನುದಾಸರಾದ ಶೂದ್ರರಿಂದ ಈಗ ರಾಜ್ಯಗಳೇ ಸ್ಥಾಪಿಸಲ್ಪಟ್ಟವು. ಬುದ್ಧ ಮಹಾವೀರ ಇವರಿಬ್ಬರು ಸಮುದಾಯ ಶಕ್ತಿಯನ್ನು ಊಹಾಪೋಹಗಳ ಮತ್ತು ಸುಖೋನ್ಮತ್ತರ ಸಂಕಲೆಯನ್ನು ಹರಿದು ಸ್ವಾತಂತ್ರ್ಯದ ಸನ್ಮಾರ್ಗಕ್ಕೆ ಹಚ್ಚಿದರು. ಮಗಧ ದೇಶದಲ್ಲಿ ಬುದ್ಧನು ಹಚ್ಚಿದ ಜ್ಞಾನ ಸ್ವಾತಂತ್ರ್ಯದ ದೇದೀಪ್ಯ ಜ್ಯೋತಿಯು ಜಗತ್ತಿನಲ್ಲಿಯೇ ಹಬ್ಬಿತು. ಕ್ರಿ. ಪೂ ೫೬೩ ರಲ್ಲಿ ಈ ಮಹಾನುಭಾವನು ಹುಟ್ಟಿದನು. ಇವನಿಂದ ಅಜಾತಶತ್ರು ಬಿಂಬಿಸರರ ಮಗಧೆಯು ನವಸಂಸ್ಕೃತಿಯ ಕೇಂದ್ರವಾಯಿತು. ಕ್ರಿ. ಪೂ ೩೭೪ ರಲ್ಲಿ ನಂದನ ಪಟ್ಟಾಭಿಷೇಕವಾಯಿತು. ಅನಂತರ ಚಂದ್ರಗುಪ್ತ ಮೌರ್ಯನು ಬಂದನು. ಈತನು ಅದ್ಭುತ ಜನಸೇವೆಯನ್ನು ಮಾಡಿದನು. ಅಲ್ಲಿಂದ ಅಶೋಕನು ಮಾಡಿದ ಮಹತ್ಕಾರ್ಯವಂತೂ ಜಗತ್ತಿಗೇ ಮಾದರಿಯಾಗಿ ನಿಂತು ಬಿಟ್ಟಿತು. ಮಹಾಭಾರತ ಯುದ್ಧದಲ್ಲಿ ಹಾಳಾದ ಭರತ ವರ್ಷದ ಪುನರ್ಜನ್ಮವಾಯಿತು.

ಅಲೆಗ್‌ಜಾಂಡರನು ೩೨೬ ಸುಮಾರರಲ್ಲಿ ಇಲ್ಲಿಗೆ ಬಂದು ನೋಡಿ ಆತನೂ ಇತರ ಗ್ರೀಕರೂ ಸ್ತುತಿಸಿದ ಭಾರತೀಯ ನಿಶ್ರೇಯಸವೆಂದರೆ ಈ ನವಸಂಸ್ಕೃತಿಯ ಪ್ರಭಾವವೇ. ಮುಂದೆ ಮೆಗೆಸ್ತೆನಿಸ್ ಚೀನಾದ ಫಾಹಿಯಾನ್, ಹ್ಯೂನ್‌ಶಾನ್, ಮುಂತಾದವರು ಹೊಗಳಿದ ಸಂಸ್ಕೃತಿಯೂ ಈ ನಾಸ್ತಿಕ ಸಾಂಪ್ರದಾಯದಿಂದುದ್ಭವಿಸಿದ್ದೇ! "ಯತಃ ಅಭ್ಯುದಯ ನಿಶ್ರೇಯಸ ಸಿದ್ಧಿಃ ಸ ಧರ್ಮಃ" ಎಂದು ವೈಶೇಷಿಕರ ಧರ್ಮ ವ್ಯಾಖ್ಯೆ. ವರ್ಣಾಶ್ರಮ ಧರ್ಮಪಟುಗಳು 'ನಾಸ್ತಿಕವಾದ ಅಧರ್ಮ' ಎಂದು ಹೀಯಾಳಿಸಿದ ಭೌದ್ಧ ಮತವನ್ನು ವೈಶೇಷಿಕರ ದೃಷ್ಟಿಯಿಂದಲೂ ಸ್ವಲ್ಪ ನೋಡುವ. ಭೌದ್ಧ

ಮತದಿಂದ ಸಂಘದ ಅಭ್ಯುದಯ ನಿಶ್ರೇಯಸಗಳುಂಟಾದವೋ ಇಲ್ಲವೋ? ಧರ್ಮವನ್ನು ತಿಳಿದುಕೊಳ್ಳುವದರ ವಿಷಯದಲ್ಲಿ ಮನು ಯಾಜ್ಞವಲ್ಕ್ಯರು ಸಹ ನ್ಯಾಯ ಮೀಮಾಂಸ ಅಂತಃಕರಣಪ್ರಮಾಣ ಇತ್ಯಾದಿಗಳನ್ನು ಸಹಿತವಾಗಿಟ್ಟುಕೊಳ್ಳಬೇಕೆಂದು ಹೇಳಿದ್ದಾರೆ. ಅಲ್ಲದೆ ಧರ್ಮಕ್ಕಾಗಿ ದೇವರೊಬ್ಬನಿದ್ದಾನೆ ಎಂದಿಟ್ಟುಕೊಳ್ಳಬೇಕೆಂದಿದ್ದಂತೆಯೂ ತೋರುವದಿಲ್ಲ. ದರ್ಶನಗಳನ್ನು ನೋಡಿದರೆ 'ಯೋಗ' ಮಾತ್ರದಲ್ಲಿಯೇ ದೇವರ ವಿಷಯವಿರುವದು. ಅಲ್ಲಿಯೂ ಆ ದೇವರ ವ್ಯಾಖ್ಯಾವಿವರ ಉಪಾಸನಾವಿಧಾನಗಳು ಬೇರೆಯೇ. ಕಪಿಲನು ಅಷ್ಟಕ್ಕೇ ನಿಲ್ಲಲಿಲ್ಲ. ದೇವರನ್ನು ಹುಟ್ಟಿಸಿದ ವೇದಗಳನ್ನು ಸಹ ಆತನು ತಿರಸ್ಕರಿಸಿ ಬಿಟ್ಟನು. ಇವುಗಳನ್ನು ಭಕ್ತಿಯಿಂದ ತಿಳಕೊಳ್ಳಬೇಕಂತೆ. ದಾರ್ಶನಿಕರು ಯುಕ್ತಿಪ್ರಿಯರು. ಇಲ್ಲಿ ತಾಲಮೇಲಕ್ಕೆಲ್ಲಿ ಅವಕಾಶ? ಅಷ್ಟೇ ಅಲ್ಲ. ಈ ವೇದಗಳೇ * ಅನೇಕ ಸಲ ಬದಲಾಗದೆ ಇದ್ದರಲ್ಲವೆ ಅವುಗಳನ್ನು ದೇವರ ವಾಕ್ಯವೆಂದು ಭಾವಿಸುವದು ಸಾಧ್ಯ? ಅವುಗಳ ಸುರಾಪಾನ ಪಶುಬಲಿ ಹಿಂಸೆಗಳಿಗಾಗಿ ಕಪಿಲನು ಅವನ್ನು ದೂರವೇ ಇಟ್ಟು ಬಿಟ್ಟನು. ಇಷ್ಟಿದ್ದರೂ ಸಕಲ ಭಾರತೀಯ ಅಧ್ಯಾತ್ಮಜ್ಞಾನವಿಧಾನಗಳಿಗೂ ಸಾಂಖ್ಯವೇ ಮೂಲ

* (ಅ) ಏಕ ಏವ ಪುರಾವೇದಃ ಪ್ರಣವಃ ಸರ್ವವಾಙ್ಮಯಃ (ಭಾಗವತ ಸ್ಕ. ೯. ಅ ೧೪—೪೮)

(ಆ) ವೇದವು ಪೂರ್ತಿಯಾಗಿ ಮರೆತು ಹೋಗಿತ್ತೆಂದು ಅಶ್ವಘೋಷನು ಹೇಳುತ್ತಾನೆ. ಮಹಾಭಾರತದಲ್ಲಿ ಶಲ್ಯಪರ್ವದಲ್ಲಿಯೂ ಈ ವಿಷಯವಿದೆ. ಕವಿ ಒಬ್ಬನನ್ನು ಬಿಟ್ಟು ಉಳಿಕೆಯ ಋಷಿಗಳೆಲ್ಲರೂ ಕಷ್ಟಮಪೀಡೆಯಿಂದ ತಪ್ಪಿಸಲಿಕ್ಕಾಗಿ ಪರದೇಶಗಳಿಗೆ ಹೋಗಿ ವೇದವನ್ನು ಮರೆತು ಬಿಟ್ಟಿದ್ದರಂತೆ. ಈ ಕವಿಸಾರಸ್ವತನು ತನ್ನ ತಾಯಿ ಸರಸ್ವತಿಯು ದಿನಾಲೂ ಕೊಟ್ಟ ಒಂದು ಮೀನನ್ನು ತಿಂದು ಅಲ್ಲಿಯೇ ಬದುಕಿದ್ದನಂತೆ. ಆ ಋಷಿಗಳು ಹಿಂತಿರಿಗಿ ಬಂದಾಗ ಈ ಸಾರಸ್ವತನೇ ಅವರಿಗೆ ಮತ್ತೆ ವೇದವನ್ನು ಹೇಳಿದನಂತೆ.

(ಇ) ಏಕೋ ವೇದಃ ಚತುಷ್ಪಾದಃ ಸಂಹೃತ್ಯತು ಪುನಃ ಪುನಃ— ಇತ್ಯಾದಿ (ಮತ್ಸ್ಯ ಪುರಾಣ—೧೪೪)

(ಈ) ವಾಯುಪುರಾಣದಲ್ಲಿಯೂ ಸಾಕಷ್ಟು ಆಧಾರವಿದೆ. ಬಾಬು ಗೋವಿಂದ ದಾಸರ Hinduism ಪುಸ್ತಕವನ್ನೋದುವದು ತ್ತಮ ಹೆಚ್ಚಿನ ಮಾಹಿತಿಗಾಗಿ.

ವೆಂದು ಹೇಳಿದರೇನೂ ಅತಿಶಯೋಕ್ತಿಯಾಗಲಾರದು. ಹೀಗಿರುವಾಗ

**ವೇದ, ದರ್ಶನ; ಬುದ್ಧ.**

ಬುದ್ಧನೊಬ್ಬನೇ ಅಲ್ಲ, ದೇವವೇದಗಳನ್ನು ತಿರಸ್ಕರಿಸಿದವನು; ಅವನ್ನು ದೂರವಿಟ್ಟು ಜ್ಞಾನವನ್ನು ಕೊಟ್ಟವನು. ಹೇತುವಾದಿಗಳಾದ ಚಾರುವಾಕರಂತೂ ವೈದಿಕರ ಅತ್ಯಾಚಾರ ದುರಾಚಾರಗಳನ್ನು ನೋಡಿ "ತ್ರಯೋವೇದಸ್ಯ ಕರ್ತಾರಃ ಭಂಡಃ ಧೂರ್ತಃ ನಿಶಾಚರಃ ‡ ಎಂದು ಬಿಟ್ಟರು. ಪಾರಮಾರ್ಥದ ಮುಸುಕಿನಲ್ಲಿ ಲೌಕಿಕವನ್ನೇ ತಡೆ ತಿಳುವಳಿಕೆಗಳಿಲ್ಲದೆ ಬಿಗಿದಪ್ಪಿಕೊಂಡಿರುವವರ ದೌಷ್ಯವನ್ನು ತೋರಿಸಲು ಹೊರಟ ಈ ಚಾರುವಾಕರೇ "ನಾಸ್ತಿಕ" ರಾದರು! ಹೆಚ್ಚು ಕಡಿಮೆ **ಎಲ್ಲ ಕಾರಣವಾದಿಗಳೂ ವೈದಿಕ ವರ್ಣಾಶ್ರಮುಪ್ರಿಯರಿಂದ ಅಸುರರೆಂದು ಕರೆಯಲ್ಪಟ್ಟದ್ದಾರೆ.** ಬುದ್ಧನ ಪಾಡೇನು ಮತ್ತೆ? ಆದರೆ ಲೋಕಕ್ಕೇನೋ ಉಪಕಾರವಾಗಿಯೇ ಆಯಿತು ಅಲ್ಲವೆ?

ಶೂದ್ರರ ಗುಲಾಮಗಿರಿಯ ಸ್ಥಿತಿಗತಿಯು ದೇವಧರ್ಮಗಳ ದರ್ಬಾರಿನಲ್ಲಿ ಹೀಗಿತ್ತು. ಹೆಂಗಸರ ಸ್ಥಿತಿಯನ್ನು ನೋಡೋಣ. ವೇದಕಾಲದಲ್ಲಿ ಇವರ ಸ್ಥಿತಿಯು ಚನ್ನಾಗಿಯೇ ಇತ್ತೆಂದು ತೋರುತ್ತದೆ. ಧರ್ಮವು ಸಂಘಜೀವನ ಸುಖಸಮಾಧಾನಗಳ ಆವಶ್ಯಕ ಹಾದಿಯನ್ನು ತುಳಿಯುತ್ತಿದ್ದಾಗ ಇವರ ಸ್ಥಿತಿಯು ಕೆಟ್ಟಿರಲಿಲ್ಲ. ಮತ್ತೆ ಬೇರೆ ಕಾಲ. ಸುಖಪ್ರಿಯರು ಅನೈಸರ್ಗಿಕ ಹಾದಿಗೆ, ಅತ್ಯಭಿಲಾಷೆಯ ಹಾದಿಗಿಳಿದಿದ್ದಾರೀಗ. ಈ ಕಾಲದಲ್ಲಿ ಹುಟ್ಟಿದ ಧರ್ಮಗಳನ್ನು ನೋಡಬೇಕಾಗಿದೆ. ಹಿಂದೆಯೇ ಕೆಲಮಟ್ಟಿಗೆ ಅದನ್ನು ಹೇಳಿರುವೆವು. ಇಲ್ಲಿ ಆಕೆಯ ಪದವಿಯ ವಿಸ್ತರ ವಿವರಗಳನ್ನು ಕೈಕೊಳ್ಳಲಾಗುವದು. ವೇದಗಳ ಮಂತ್ರತಂತ್ರಗಳಿಗೆ ಯಜ್ಞಯಾಗಾದಿಗಳು ಮುಖ್ಯವಷ್ಟೆ? ಮೊದಲು ವೇದಕಾಲದಲ್ಲಿ ದಕ್ಷಿಣಾ, ಯಮಿ, ಶಚಿ, ಜುಹು ಮುಂತಾದ ಅನೇಕರು ಮಂತ್ರಗಳನ್ನೇ ರಚಿಸಿದರು. ಯಜ್ಞಗಳನ್ನು ತಾವೇ ನಡೆಸುತ್ತಿದ್ದರು. **ಬರಬರುತ್ತ ಹೆಂಗಸರಿಗೆ ಅಂಥ ವಿಶೇಷ ಧರ್ಮಕರ್ಮಗಳನ್ನು ನಡೆಸುವ** ಆ ಅಧಿಕಾರವು ಹೋಗಿ

‡ ಸರ್ವದರ್ಶನ ಸಂಗ್ರಹ.

ಬಿಟ್ಟಿತು. ಯಾಕೆ? ಇವು ಮಾರ್ಪಟ್ಟು ಯಜ್ಞಗಳಿಗೆ ತಪ್ಪದೆ ಬೇಕಾದ ಸುರಾಪಾನ ಪ್ರಾಣಿ ಹಿಂಸೆ- ಇವುಗಳನ್ನು ಸಹಿಸಲಿಕ್ಕೆ ಹೆಂಗ ಸರಿಗಾಗುವದಿಲ್ಲವಂತೆ! ಆದುದರಿಂದ ಹೆಂಗಸರು ಯಜ್ಞಕ್ಕೆ ಅಯೋಗ್ಯರು! ಯಜ್ಞಕ್ಕೆ ಅರ್ಹತೆಯಿಲ್ಲವಾದರೆ ವೇದಾಭ್ಯಾಸಕ್ಕೆ ಅಧಿಕಾರವಿಲ್ಲ. ವೇದವು ಧರ್ಮಮೂಲ; ಆದುದರಿಂದ ಹೆಂಗಸರು ಧರ್ಮದಿಂದಲೂ ದೂರ. ಅದಕ್ಕಾಗಿ 'ಪಾಪಯೋನಿ'ಗಳಿವರು. ಅಷ್ಟೇಕೆ- ಅವರ ಬುದ್ಧಿಯು ಅವರಿಗೆ ಸಹ ಉಪಯೋಗಕ್ಕೆ ಬರಲಾರದು. ಪಾಪದಲ್ಲಿಯೇ ಹುಟ್ಟಿದ ಬುದ್ಧಿಯು ಪಾಪದ ಹಾದಿಗೇ ಎಳೆಯದಿರುವದೇ? ಅದಕ್ಕಾಗಿ ಹೆಂಗಸು ಪಾಪದಿಂದ ದೂರಳಾಗಬೇಕಾದರೆ ಧರ್ಮಾರ್ಜನಾದ ಪುಣ್ಯಾತ್ಮನಾದ ಗಂಡಸಿನ ಉಪದೇಶದಂತೆಯೇ ಬೆಳೆಯಬೇಕು. ಆದರೂ ಆಕೆಯನ್ನು ಬಿಟ್ಟರೆ ಗಂಡಸಿಗೆ ಗತಿಯಿಲ್ಲ. ಆಕೆಯನ್ನು ತಮ್ಮ ದೇವರೇ ಏತಕ್ಕಾಗಿ ಹುಟ್ಟಿಸಿದನು ಎಂದೂ ಒಂದು ಪ್ರಶ್ನೆ ಅವನನ್ನು ಕಾಡಿಸುತ್ತದೆ. ಅದಕ್ಕೂ ಉತ್ತರವನ್ನು ಕೊಟ್ಟೇ ಬಿಟ್ಟಿತು ಧರ್ಮೋಕ್ತಿ! 'ಪುತ್ರಾರ್ಥೇ ಭಾರ್ಯಾ' ಸಂತಾನಕ್ಕೋಸ್ಕರ ಹೆಂಡತಿ. ಆಕೆಗೆ ಬೇರೇನೂ ಕೆಲಸವಿಲ್ಲ ಸಂಸಾರದಲ್ಲಿ, ಸಂಘದಲ್ಲಿ! ಮಕ್ಕಳನ್ನು ಹುಟ್ಟಿಸಿದರಾಯಿತು. ಬೆಳೆಸುವ ಗೊಡವೆ ಮಾತ್ರವಿಲ್ಲ! ಆ ವಿಷಯ ಯಾವ ಧರ್ಮಶಾಸ್ತ್ರಗಳಲ್ಲಿಯೂ ವೇದ, ಕುರಾನ್, ಬೈಬಲ್ ಜಂದವಸ್ತು ಯಾವದರಲ್ಲಿಯೂ ಚರ್ಚೆಯೇ ಇಲ್ಲ. ಮಕ್ಕಳನ್ನು ಹೇಗೆ ಬೆಳೆಸಬೇಕು, ಶಿಕ್ಷಣವು ಎಂತಹದಿರಬೇಕು, ಅವುಗಳ ನಿಸರ್ಗಕ್ಕೆ ಸರಿಯಾಗಿ, ಅವುಗಳಿಗೆ ಯೋಗ್ಯವಾದ ಅನ್ನಬಟ್ಟೆಗಳಾವವು?- ಮುಂತಾದ ವಿಷಯಗಳ ವಿವರವೇ ಇಲ್ಲ ಎಲ್ಲೆಲ್ಲಿಯೂ! ಇವೆಲ್ಲವನ್ನೂ ನೋಡಿಕೊಳ್ಳಲಿಕ್ಕೆ ಆ ದೇವರೇ ಇಲ್ಲವೋ? ಉಂಟುಮಾಡಿದ ದೇವರು ಊಟ ಕೊಡಲಾರನೇ? ಹೊಟ್ಟೆ ಕೊಟ್ಟವ ಹಿಟ್ಟು ಕೊಡಲಾರನೇ?- ಇವೇ, ಅನ್ನವನ್ನು ಕುರಿತು ಸಮಾಧಾನಗಳು! ಶಿಕ್ಷಣದ ವಿಷಯವೋ ಮತ್ತೆ? ಮೀನಿಗೆ ಈಸು ಕಲಿಸಿದವರಾರು! ಹಕ್ಕಿಗೆ ಹಾರುವದನ್ನು ಕಲಿಸಿದವರಾರು! ಕೋಗಿಲೆಗೆ ಹಾಡು ಕಲಿಸಿದವ

**ಮದುವೆಯು ಮಕ್ಕಳಿಗಾಗಿಯೋ?**

ರಾರು! ಅಂಥ ಆ ಪರಮಾತ್ಮನು ಉಚ್ಚ ಜೀವಿಯಾದ ಮಗುವನ್ನು
ಉಪೇಕ್ಷಿಸುವನೇ? ಇದು ಸಮಾಧಾನ! ಮೇಲೆ ಸಂತತಿಗಾಗಿ ಹೆಂಡ
ತಿಯಂತೆ! ಆದರೆ ಮಕ್ಕಳಿಗಾಗಿ ಧರ್ಮವು ಬರೆದಿಟ್ಟದ್ದೆಷ್ಟಕ್ಕೇ ಇದೆ.
**ಅವುಗಳ ಚಿಂತೆಯೇ ಯಾವ ಮತಕ್ಕೂ ಇಲ್ಲ, ಯಾವ ಧರ್ಮ
ಕ್ಕೂ ಇಲ್ಲ.** ಹುಟ್ಟಿದ ಮಗುವನ್ನು ಬೆಳೆಸುವದರ ವಿಷಯ ಒಂದಾದರೂ
ಯೋಗ್ಯ ಗ್ರಂಥವಿದೆಯೋ ಧರ್ಮಗಳಲ್ಲಿ? ಅವುಗಳ ಅನ್ನ ಬಟ್ಟೆ
ವಿದ್ಯೆಯ ಪದ್ಧತಿಗಳು ಇವೆಲ್ಲವೂ ಅನೈಸರ್ಗಿಕ, ಅವುಗಳ ಸುಖಾರೋ
ಗ್ಯಗಳಿಗೆ ವೈರಿ. ಹೀಗೇಕೆ? ನಿಜವಾದ ಮಾತು ಏನೆಂದರೆ ಹೆಂಗಸು
ಬರೀ ತನ್ನ ಲೌಲ್ಯಕ್ಕೆ ಬೇಕಾದ ವಸ್ತು. ಹಾಗೆನ್ನಲಿಕ್ಕೆ ಮಾತ್ರ
ಧೈರ್ಯವಿಲ್ಲ. ಅದಕ್ಕಾಗಿ ಈ 'ಪುತ್ರಾರ್ಥೆ'........ ಒಂದು ಸಮಾ
ಧಾನ! ಆ ತನ್ನ ನೀಚ ಸುಖಾಭಿಲಾಷೆಯನ್ನು ಪೂರೈಸುವದೇ ಮುಖ್ಯ
ಧ್ಯೇಯ. ಮಾತು ಎಷ್ಟು ದೊಡ್ಡದಾಗಿದ್ದರೂ ಏನಾಯಿತು? ಉದ್ದೇಶ
ಮಾತ್ರ ಪಶುಜೀವನಕ್ಕೆ ಅನುಕೂಲತೆ ಅದೊಂದೇ. ಮತ್ತದಕ್ಕೇ
'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'। ಹೆಂಗಸಿನ ಪರಾಧೀನತೆಯ ಆವ
ಶ್ಯಕತೆಯನ್ನು ಉಪದೇಶಿಸದೆ ಇರುವ ಮತಗ್ರಂಥಗಳೇ ಯಾವ ಮತ
ದಲ್ಲಿಯೂ ಇಲ್ಲ. ಇವುಗಳಿಗೆ ಕಿರೀಟವೆಂದರೆ ಪದ್ಮಪುರಾಣ! ಅದರ
ಉಪದೇಶವನ್ನು ಸ್ವಲ್ಪ ನೋಡುವ. ಯಾಕೆಂದರೆ ಋಷಿಪ್ರೋಕ್ತ
ವಿಷಯ, ಪುರಾಣವೆಂದರೆ!!–

ಹೆಂಗಸಿಗೆ ಇಹದಲ್ಲಿ ಗಂಡಸಿಗಿಂತ ವಿಶೇಷನಾದ ದೇವವಿಲ್ಲ. ಆಕೆಯು ಮಾಡ
ಲರ್ಹವಾದ ಅತ್ಯುತ್ತಮ ಧರ್ಮವೆಂದರೆ ಅತನಿಗೆ ಪೂರ್ಣ ವಿಧೇಯಳಾಗಿದ್ದು ಅತ
ನನ್ನು ಮೆಚ್ಚಿಸುವದು. ಆಕೆಯ ಜೀವನ ಸೂತ್ರವೆಲ್ಲ ಇಲ್ಲಿರಬೇಕು.

ಆಕೆಯ ಗಂಡನು ವಿಕಲಾಂಗನಾಗಿರಲಿ, ಮುದುಕನಾಗಿರಲಿ, ಕುರುಡನಾಗಿ
ರಲಿ, ಅಶಿಷ್ಟನಾಗಿರಲಿ, ಶೀಘ್ರಕೋಪಿಯಾಗಿರಲಿ, ವ್ಯಭಿಚಾರಿಯಾಗಿರಲಿ, ದುರಾಚಾರಿ
ಯಾಗಿರಲಿ, ಜೂಜುಖೋರನಾಗಿರಲಿ............... ಪರಸ್ತ್ರೀಯೊಡನೆ ಬದುಕಿರಲಿ..
...... ಹೆಂಡತಿಯಲ್ಲಿ ಪ್ರೇಮವಿಲ್ಲದವನಾಗಿರಲಿ, ಹುಚ್ಚನಂತೆ ಕೂಗಲಿ; ಮಾನ
ವಿಲ್ಲದವನಾಗಿರಲಿ......... ಸಾರಾಂಶ– ಆತನಲ್ಲಿ ಲೋಪವು ಬೇಕಾಗಿದ್ದಿರಲಿ, ಆತನ
ದೌಷ್ಟ್ಯವು ಬೇಕಾದದ್ದಿರಲಿ, ಆತನ ಹೆಂಡತಿಯು ಮಾತ್ರ ಆತನನ್ನು ದೇವರೆಂದೇ
ಭಾವಿಸಬೇಕು; ತನ್ನಿಂದಾಗುವ ಸೇವೆಯನ್ನೆಲ್ಲ ಅರ್ಪಿಸಬೇಕು; ಆತನ ಲೋ

ನ್ಯೂನತೆ ದೌಷ್ಟ್ಯಗಳ ಪರಿವೆಯನ್ನಿಟ್ಟುಕೊಳ್ಳದೆ ಆತನಿಗೆ ಅಸಂತೋಷವಾಗದಂತೆ ಆಕೆಯು ನೋಡಿಕೊಳ್ಳಬೇಕು.

ಹೆಂಗಸು ಹೆಜ್ಜೆಹೆಜ್ಜೆಗೂ ಹೀಗೆ ವಿಧೇಯಳಾಗಿರಲಿಕ್ಕಾಗಿ ಸೃಷ್ಟಿಸಲ್ಪಟ್ಟಿದ್ದಾಳೆ. ......... ಗಂಡನು ಎಲ್ಲಿಗಾದರೂ ಹೋದರೆ ಆಕೆಯು ಆತನ ಅನುಮತಿಯಿಂದ ಕೂಡಿ ಹೋಗಲಿ. ಮನೆಯಲ್ಲಿರು ಎಂದರೆ ಅದನ್ನು ಬಿಟ್ಟು ಹೋಗದಿರಲಿ. ಆತನು ಹಿಂತಿರುಗುವ ವರೆಗೆ ಆಕೆಯು ಸ್ನಾನ ಮಾಡಬಾರದು, ತಲೆಗೆ ಎಣ್ಣೆ ಹಚ್ಚಿಕೊಳ್ಳಬಾರದು, ಹಲ್ಲು ತಿಕ್ಕಿಕೊಳ್ಳಬಾರದು, ಉಗುರುಗಳನ್ನು ಕತ್ತರಿಸಬಾರದು. ದಿನಕ್ಕೊಮ್ಮೆಯೇ ಉಣ್ಣಬೇಕು. ಹಾಸಿಗೆಯ ಮೇಲೆ ಮಲಗಬಾರದು. ಹೊಸ ಬಟ್ಟೆಗಳನ್ನು ಧರಿಸಬಾರದು. ಹಣೆಗೆ ಅಲಂಕಾರವನ್ನಿಟ್ಟುಕೊಳ್ಳಬಾರದು.

ಮುಟ್ಟಾದಾಗ ಮೂರು ದಿನ ಬೇರೆಯಾಗಿರಬೇಕು. ಈ ಕಾಲದಲ್ಲಿ ಆಕೆಯು ಯಾರನ್ನು ನೋಡಬಾರದು. ತನ್ನ ಮಕ್ಕಳನ್ನು ಸಹ ನೋಡಬಾರದು. ಸೂರ್ಯನ ಬೆಳಕನ್ನು ಸಹ ಕಾಣಬಾರದು. ನಾಲ್ಕನೆಯ ದಿನ ಮೀಯಬೇಕು............... ......... ಗಂಡನು ಆಡುವಾಗ ಆಕೆ ಸುಮ್ಮನಿರಬೇಕು......... ಹಾಡುವಾಗ ಆಕೆಯು ಅತ್ಯಾನಂದದಲ್ಲಿರಬೇಕು. ಕುಣಿದರೆ ಆತನನ್ನು ಸಂತೋಷದಿಂದ ದಿಟ್ಟಿಸಬೇಕು. ಪಾಂಡಿತ್ಯವನ್ನು ತೋರಿಸಿದರೆ ಗೌರವದಿಂದ ನೋಡಬೇಕು. ಆತನಿದಿರಿನಲ್ಲಿ ಸದಾ ಸಂತೋಷವನ್ನೇ ತೋರಿಸಬೇಕು

ಗಂಡನು ಸಿಟ್ಟಿಗೆದ್ದರೆ, ತನ್ನನ್ನು ಗದರಿಸಿದರೆ, ಕೆಟ್ಟದಾಗಿ ಬೈದರೆ, ಅನ್ಯಾಯವಾಗಿ ಹೊಡೆದರೆ ಸಹ, ಆಕೆಯು ಸೌಮ್ಯ ರೀತಿಯಿಂದಲೇ ಉತ್ತರ ಕೊಡಬೇಕು. ಆತನ ಕೈಗಳನ್ನು ಹಿಡಿದು ವಂದಿಸಬೇಕು. ಹಾಗೆ ಆತನಿಂದ ಕ್ಷಮಾಪಣೆಯನ್ನು ಬೇಡಬೇಕು.

ಈ ಪುರಾಣದ ಅನುವಾದವನ್ನು ಇಲ್ಲಿಗೇ ಮುಗಿಸೋಣ. ಹೇಗಿದೆ ಉಪದೇಶ! ಮಕ್ಕಳ ಉದ್ಧಾರಕ್ಕಾಗಿ ಹೀಗೆ ಮಾಡು ಎಂದು ಒಂದು ಮಾತೂ ಇಲ್ಲ!! ಇದನ್ನು ತೆಕ್ಕೊಂಡವನು ಮಹಾರಾಜ ದಿಲೀಪನು. ರಾಜನೇ ಇಂಥ ಭಕ್ತನಾದರೆ ಪ್ರಜೆಯ ಗತಿಯೇನು? ಮತ್ತೀ ಉಪದೇಶವು ಅಪರೂಪವಲ್ಲ. ಹೆಂಗಸರ ಬುದ್ಧಿಯನ್ನು ಬೂದಿಯೆಂದು ಭಾವಿಸಿ ಅವರಿಗೆ ಯೋಗ್ಯವಾದ ಅನ್ನ ಬಟ್ಟೆ ಒಡವೆ ವಿದ್ಯೆ ಧರ್ಮ ಕರ್ಮ ಇತ್ಯಾದಿಗಳನ್ನು ಎಷ್ಟೋ ಗ್ರಂಥಗಳು ಉಪದೇಶಿಸಿವೆ. ಗಂಡಸು ನೂರು ಹೇಳಿದರೆ ಆಕೆ ಮೂರು ಮಾತ್ರ ಪೂರೈಸಿದ್ದಾಳೆ. ಅಷ್ಟಕ್ಕೇ ದೇಶವು ಇಲ್ಲಿಗಿಳಿದಿದೆ. ಆಕೆಯು ಬಿಟ್ಟ ಕೆಲ

ಸಗಳಿಗಾಗಿ ಕಾಮಮದಾಂಧನಾದ ಗಂಡಸೂ ಆಕೆಯನ್ನು ದಂಡಿಸದೆ ಬಿಟ್ಟಿದ್ದಾನೆ. ಹಾಗಿಲ್ಲದೆ, ಪಡೆದ ಉಪದೇಶವನ್ನೆಲ್ಲ ಆಕೆಯು ನಡಿಸಿ ಬಿಟ್ಟದ್ದೇ ಆಗಿದ್ದರೆ ಈ ಹಿಂದೂ ಜನಾಂಗವೇ ನಿರ್ನಾಮವಾಗಿ ಹೋಗದೆ ಇರುತ್ತಿದ್ದಿಲ್ಲ. ಇಹವನ್ನು ಪೂರ್ತಿಯಾಗಿ ಬಿಟ್ಟೇ ಬಿಟ್ಟು ಪರಕ್ಕೇ ತೆರಳುತ್ತಿತ್ತು. ಈ ಪುಣ್ಯಭೂಮಿಯು ಧರ್ಮನಿಷ್ಠ ಜನಾಂಗವು! ಅತ್ಯಭಿಲಾಷೆಯ ವಿಷಯಾತ್ಮಕ ಕಪೋಲಕಲ್ಪಿತ ಧರ್ಮವು ತನ್ನ ಕುಕರ್ಮಗಳ ಅನಿವಾರ್ಯ ಫಲವನ್ನುಣ್ಣುತ್ತಿತ್ತು! ಆದರೆ ನಿಸರ್ಗವು ಬಿಡಲಿಲ್ಲ. ಅದು ಅನೈಸರ್ಗಿಕ ಧರ್ಮಾಚರಣೆಗೆ ಇದಿರಾಗಿ ನಿಂತು ಧರ್ಮಾತ್ಮರ ಸಂತಾನವನ್ನು ಇಲ್ಲಿಯೇ ತಡೆದಿಟ್ಟಿತು. ಆದುದರಿಂದ ಹಿಂದುಗಳು ಹಿಂದುಳಿದುಕೊಂಡೇ ಇದ್ದರೂ ಇನ್ನೂ ಏನೋ ಇದ್ದಾರೆ ಈ ಹಿಂದುಸ್ಥಾನದಲ್ಲಿ!

ಕ್ರೈಸ್ತ ಮತವು ಹೇಗಿದೆ ನೋಡೋಣ. ಈ ವಿಷಯದಲ್ಲಿ ಅದರ ಕರ್ತೃವಾದ ಯೇಸುವೇ ತನ್ನ ತಾಯಿಗೆ 'ಹೆಂಗಸೇ, ನಿನ್ನೊಡನೆ ನನಗೇನಿದೆ' * ಎಂದೆನ್ನುತ್ತಾನೆ! ಪೌಲನು ತಿಮೊತಿಗೆ ಬರೆದ ಮೊದಲನೆಯ ಪತ್ರದಲ್ಲಿ ಈ ವಿಷಯವು ಇನ್ನೂ ಚನ್ನಾಗಿ ತೋರಿಬರುತ್ತದೆ- 'ಪೂರ್ಣ ಪರಾಧೀನತೆ ಹೆಂಗಸರು ಕಲಿಯಲಿ. ಹೆಂಗಸು ಕಲಿಸುವದಕ್ಕಾಗಲಿ ಗಂಡಸಿನ ಅಧಿಕಾರವನ್ನು ಆಕ್ರಮಿಸುವದಕ್ಕಾಗಲಿ ನಾನು ಒಪ್ಪುವದಿಲ್ಲ. ಆಕೆಯು ಅಧೀನಳೇಯಾಗಿರಬೇಕು.

ಕ್ರೈಸ್ತ ಮತವೂ ಹೆಂಗಸೂ

ಯಾಕೆಂದರೆ ಆದಮನು ಮೊದಲು ಸೃಷ್ಟಿಸಲ್ಪಟ್ಟನು, ಆನಂತರ ಹವ್ವಳು. ಆದಮನು ಮೋಸಹೋಗಲಿಲ್ಲ, ಆದರೆ ಆ ಹೆಂಗಸು ಮೋಸಹೊದಳಾದುದರಿಂದ ಅಪರಾಧವು ಆಕೆಯದು. ಆದರೂ ಶ್ರದ್ಧೆ, ದಾನ, ಪವಿತ್ರತೆ, ನಿರೋಧಗಳನ್ನು ನಡೆಸಿಕೊಂಡಿದ್ದರೆ ಮಕ್ಕಳನ್ನು ಹಡೆಯುವದರಿಂದ ಆಕೆಯು ಉದ್ಧರಿಸಲ್ಪಡುವಳು.' ‡ ಹೇಗಿದೆ, ಹೆಂಗಸಿಗೆ ದೇವಧರ್ಮಗಳು ಕೊಡುವ ಮಾನ? ಟರ್ಟ್ಯುಲಿಯನ್, ಸೈಂಟ್ ಎಂಬ್ರೋಸ್ ಮುಂತಾದ

* ೨, ೪

‡ ೨, ೧೧–೧೫

ಇನ್ನೂ ಅನೇಕ ಕ್ರೈಸ್ತಭಕ್ತ ಸಾಧುಗಳಂತೂ ನಮ್ಮಲ್ಲಿಯ ದಾಸರು ಅನೇಕರು ಹಾಡಿದಂತೆ 'ನಾರಿ ನರಕಕೆ ದಾರಿ ನಾರಿ ಮಹಾಮಾರಿ' ಎಂದೇ ಹಾಡಿದ್ದಾರೆ! ಅಷ್ಟೇ ಏಕೆ– ಹೆಂಗಸು ದೇವರ ಸೃಷ್ಟಿಯೋ ಸೈತಾನನ ಸೃಷ್ಟಿಯೋ ಎಂಬದಾಗಿ ಸಂದೇಹ ವಿವಾದಗಳು ಸಹ ಆ ಮತಾನುಯಾಯಿಗಳಲ್ಲಿ ಒಮ್ಮೆ ನಡೆದಿವೆ! 'ಈ ಘೋರವಾದ ಸಂಸಾರಮಹಾಸಾಗರವನು' 'ಹೆಂಡತಿ ಪ್ರಾಣ ಹಿಂಡುತಿ' 'ಮಡದಿ ಮಕ್ಕಳ ಮರೆಯೆ ಮಹಾದೇವ ಮೆಚ್ಚುವನು' ಮುಂತಾದ ಸಾವಿರಾರು ಉದ್ಗಾರಗಳನ್ನು ನಮ್ಮಲ್ಲಿಯ ಭಕ್ತರೂ ದಾಸರೂ ತೆಗೆದಂತೆ ಅವರಲ್ಲಿಯೂ ಧಾರಾಳವಾಗಿ ತೆಗೆದಿದ್ದಾರೆ! ಇಸ್ಲಾಮ್ ಧರ್ಮದಲ್ಲಿ ಮಾತ್ರ ಈ ಗೋಳು ಕಡಿಮೆ. ಹೆಂಗಸಿಗೆ ಗಂಡನಿಗೆ ಅಧೀನವಾಗಿರಬೇಕೆಂಬ ಉಪದೇಶ ಸ್ವಲ್ಪ ಇದೆಯಾದರೂ ಈ ಗೋಳಿಲ್ಲ. ಸಂತಾನಕ್ಕಾಗಿ ಮಾತ್ರ ಸಂಸಾರವನ್ನು ಮಾಡುವ ಈ ಮಹಾನುಭಾವರಿಗೆಲ್ಲೆಲ್ಲಿಯೂ ಮಕ್ಕಳ ಮೇಲೆ ಪ್ರೀತಿಯಿದ್ದದ್ದು ಕಾಣುವದೇ ಇಲ್ಲ. ಟಟ್ರ್ಯಲಿಯನನು ಮಕ್ಕಳನ್ನು 'ದೈವಭಕ್ತಿಗೆ ಕೇವಲ ಅನನುಕೂಲವಾಗಿದ್ದು ಸಂಸಾರ ತಾಪಗಳಲ್ಲಿ ಬಹು ತೊಂದರೆಯನ್ನುಂಟುಮಾಡುವಂಥ ಭಾರ" ಎಂಬದಾಗಿ ವರ್ಣಿಸಿದ್ದಾನೆ. ಈ ಭಾರವು ಇಹಕ್ಕೇ ಬಾರದಂತೆ ಮೊದಲೇ ನೋಡಿಕೊಳ್ಳುವದುತ್ತಮವಲ್ಲವೇ? ಇಂಥವರಿಗೆ ಹೆಂಡತಿಯಾಕೆ? ಆಕೆಗೆ ಅತ್ತೆ, ಮಾವ, ದೇವಧರ್ಮ, ಇವುಗಳ ಕಾಟವೇಕೆ?

ದೇವನೆಂದು ಪೂಜಿಸಲ್ಪಡುವ ರಾಮಚಂದ್ರನೇ ತನ್ನ ಹೆಂಡತಿಯ ಹೊಟ್ಟೆಯಲ್ಲಿ ಮಕ್ಕಳಿರುವಾಗಲೇ ಆಕೆಯನ್ನು ವನವಾಸಕ್ಕೆ ಕಳಿಸಲಿಲ್ಲವೇ? ರಾಮಾಯಣದಲ್ಲಿ ಆಕೆಯ ಪಾತಿವ್ರತ್ಯದ ಪರೀಕ್ಷೆಯೊಮ್ಮೆಯಾಯಿತು. ಮತ್ತು ಉತ್ತರರಾಮಚರಿತ್ರೆಯಲ್ಲಿ ಆ ಸುದ್ದಿಯನ್ನೇ ಮತ್ತೆ ಎತ್ತಿ ಸೀತೆಯನ್ನು ಹಾಗೆ ದಂಡಿಸುವದಕ್ಕೇನು

ರಾಮಾಯಣದ ಮಾದರಿ

ಕಾರಣ? ಅಂಥ ಮಹಾಪ್ರಭುವಿನ ಹೆಂಡತಿಯಾಗಿದ್ದರೂ ಒಮ್ಮೆ ಸಂಶಯಕ್ಕಾಸ್ಪದವನ್ನು ಕೊಟ್ಟಳೋ ಹೆಂಗಸು, ಆಕೆಯ ಗತಿಯು ಹೀಗೆ ಎಂದು ಒತ್ತಿ

ತೋರಿಸಿ ಹೆಂಗಸರನ್ನು ದಬಾಯಿಸಿಡಲಿಕ್ಕಾಗಿಲ್ಲವೆ ಈ ಉಪಾಯ? ಮೇಲೆ ರಾಮಚಂದ್ರನು ಕೇವಲ ಧರ್ಮಪರಿಪಾಲನೆಗಾಗಿಯೇ ಆಕೆಯನ್ನೋಡಿಸಿ ಬಿಟ್ಟನಂತೆ. ಆತನಿಗೆ ಮನಸ್ಸಿನಲ್ಲಿ ನಿಜವಾಗಿ ಯೂ ಅನುರಾಗವಿತ್ತಂತೆ! ಭಳಿರೇ- ಅನುರಾಗ! ಹಾಗಿದ್ದದ್ದೇಯಾದರೆ, ಆಕೆಯು ಪವಿತ್ರಳಾಗಿದ್ದಾಳೆ ಎಂದು ತಿಳಿದ ಪ್ರೇಮಮಯ ರಾಮಚಂದ್ರನು ಪತಿವ್ರತೆಯ ಮಾನಕ್ಕಾಗಿ ತನ್ನಲ್ಲಿಯ ಪ್ರೇಮಕ್ಕಾಗಿ, ಆ ಪವಿತ್ರ ಸೀತೆಗಾಗಿ ನಿಂದಕ ಪ್ರಜೆಗಳ ಮುಂದೆ ರಾಜ್ಯವನ್ನು ಭರತನಿಗರ್ಪಿಸಿ ತಾನೇ ಆಕೆಯೊಡನೆ ಅರಣ್ಯವನ್ನು ಸೇರಿಬಿಟ್ಟಿದ್ದರೆ ಇನ್ನೂ ಒಳ್ಳೆಯ ನ್ಯಾಯವಾಗುತ್ತಿತ್ತಲ್ಲವೆ? ನ್ಯಾಯ ದಯಾಪ್ರೇಮಗಳ ಸಾಮರಸ್ಯವೇ ಆಗುತ್ತಿತ್ತು. ಆದರೆ ಗ್ರಂಥಕಾರರ ಉದ್ದೇಶ ಇಂಥ ನಿಜವಾದ ಸಮರಸ ಧರ್ಮವನ್ನು ತೋರಿಸುವದಿಲ್ಲ. **ಹೆಂಗಸಿಗೆ ಮೇಲ್ಪಂಕ್ತಿ ತಾಕೀದುಗಳನ್ನು ತೋರಿಸುವದೇಯಾಗಿತ್ತು.** ಕೇವಲ ರಾಮಭಕ್ತನಾದ ತುಲಸಿದಾಸನೂ

'ಢೋಲ ಗಂವಾರ ಶೂದರ ಶಿಶು ನಾರಿ।
ಯಃ ಸಬ ತಾಡನಕೆ ಅಧಿಕಾರಿ ॥'

ಎಂದು ಬರೆದಿದ್ದಾನೆ. ಢೋಲು, ಹಳ್ಳಿಗಾರ, ಶೂದ್ರ, ಶಿಶು, ನಾರಿ ಇವರೆಲ್ಲರೂ ತಾಡನ ಮಾತ್ರಕ್ಕೇ ಅಧಿಕಾರಿಗಳಂತೆ. ಢೋಲನ್ನು ಬಡೆದು ನುಡಿಸಬೇಕು ಹಾಗೇ ಇವರನ್ನೆಲ್ಲ ಹೊಡೆದು ನಡೆಸಬೇಕು. ಎಂದೀ ಮಹಾನುಭಾವನ ಮತ! ಅತಿಯಾಗಿ ಇಂದ್ರಿಯ ಸುಖಾಭಿಲಾಷೆಗೇ ಬಿದ್ದ ಸಮಾಜದ ಕೃತ್ರಿಮ ಜೀವನದ ಪ್ರಭಾವವು ಹೇಗಿದೆ? ಹೆಬ್ಬಾವಿನ ಹಿಡಿತ! ದೊಡ್ಡ ದೊಡ್ಡ ಸಾಧುಗಳನ್ನು ಕೂಡ ಇದು ಬಿಟ್ಟಿಲ್ಲ.

ಮಹಾಭಾರತದಲ್ಲಿಯೂ ಎಷ್ಟೋ ಕಡೆ ಹೆಂಗಸು ಗಂಡಸಿನ ಸಂಭೋಗಸಾಮಗ್ರಿಯಾಗಿ ನಿರ್ಜೀವ ವಸ್ತುವಿನಂತೆಯೇ ಭಾವಿಸಲ್ಪಟ್ಟಿದ್ದನ್ನು ನೋಡಬಹುದು. ದ್ರೌಪದಿಯನ್ನೇ ಜೂಜಿನಲ್ಲಿ ಪಣವಾಗಿಡಲಿಲ್ಲವೇ? ಇಟ್ಟವನು ಮೇಲೆ ಧರ್ಮರಾಜನು! ಆಕೆಯನ್ನು ಸಭೆಗೆ ಎಳೆದು ತಂದು ಅವಮಾನಿಸಿದವರೂ ರಾಜಕುಲಕ್ಕೆ ಸೇರಿದ ದ್ವಿಜರಾಜ ಗಂಡಸರೇ! ಋಷಿಗಳು ಮಾತ್ರ ನೋಡಲಾರದೆ ಎದ್ದು

ಹೋದರಂತೆ. ಇದರಿಂದ ತಕ್ಕ ಮಟ್ಟಿಗಾದರೂ ಭಾರತದ ಮಾನವು ಉಳಿಯಿತು. ಕಾಮಾಭಿಲಾಷೆಯನ್ನು ಪೂರೈಸುವದಕ್ಕೆ ಹೆಂಗಸಿನ ದೇಹವೊಂದಿದ್ದರೆ ಸಾಕು. ಆಕೆ**ಯ ಜ್ಞಾನಮಾನ ಗುಣಗಳು ಲೆಕ್ಕಕ್ಕೆ ಬೇಕಾಗಿಯೇ ಇಲ್ಲ.** ಇವುಗಳ ಆವಶ್ಯಕತೆಯನ್ನು ಪರಾಶರ ವ್ಯಾಸರಂಥ ಋಷಿಗಳು ಸಹ ನೋಡಲಿಲ್ಲ. ಭೀಮ ಅರ್ಜುನರಂಥ ಕ್ಷತ್ರಿಯ ವೀರರೂ ನೋಡಲಿಲ್ಲ. ಸ್ತ್ರೀಗೆ ದೇಹವು ಒಂದಿದ್ದರೆ ಸಾಕು. ಕಾಳಿದಾಸನಂಥ ದೊಡ್ಡ ಕವಿಗಳ ವರ್ಣನೆಗೂ ಹೆಚ್ಚಾಗಿ ಬರುವದು ಇವರ ಅಂಗಾಂಗ ಸೌಂದರ್ಯವೇ. ಜ್ಞಾನರಸಭೂಮಿಗಳಲ್ಲಿ ಇಬ್ಬರಿಗೂ ಅಜಗಜಾಂತರ! ಸ್ತ್ರೀ 'ಪಾತ್ರ' ಮಾತ್ರವೇ ಅಂತೆ!! **ನಮ್ಮ ದೇವರೇ ಋಷಿ ಮುನಿಕವಿಗಳೇ-ಮಾದರಿ ನಮೂನೆಗಳೇ ಇಂಥವರಾದರೆ ಅನುಯಾಯಿಗಳು ಹೇಗಿರಬೇಕು? ಸಮಾಜದ ಗತಿಯೇನು?** ಅನುಯಾಯಿಗಳೂ ಮಾದರಿಯನ್ನು ಮನ್ನಿಸುತ್ತಲೇ ಇದ್ದಾರೆ. ಲಕ್ಷ್ಮಣನು ಸಹಜವಾಗಿ ತನ್ನನ್ನು ಪ್ರೀತಿಸ ಬಂದ ಒಬ್ಬ ಪರಸ್ತ್ರೀಯ ಮೂಗನ್ನೇ ಕೊಯ್ದು ಬಿಟ್ಟು ತನ್ನ ಧರ್ಮ ಬುದ್ಧಿಯನ್ನು ತೋರಿಸಿದನಾದರೆ, ಅತನ ಅನುಯಾಯಿಗಳಲ್ಲನೇಕರು ಮಾಡಿಕೊಂಡ ಹೆಂಡತಿಯ ಕಿವಿ ಮೂಗುಗಳನ್ನೇ ಎಷ್ಟೋ ಕಡೆ ಕೊಯ್ದಿದ್ದನ್ನು ಪೊಲೀಸ್ ಕೋರ್ಟ್ ರಿಪೋರ್ಟು ಗಳಿಂದ ಕಾಣಬಹುದು. ಅಷ್ಟೇ ಅಲ್ಲ ಕಾಲವು ಪ್ರಗತಿಯನ್ನು ಕಂಡಿದೆಯಲ್ಲವೆ! ಅದಕ್ಕಾಗಿ ಹೆಂಗಸನ್ನು ಈಗ ಬಟ್ಟೆಗೆ ಕೆರೊಸಿನ್ ಎಣ್ಣೆ ಹಾಕಿ ಸುಟ್ಟದ್ದನ್ನು ಸಹ ಕೇಳಬಹುದು. ವನವಾಸಕ್ಕಟ್ಟುವದಂತೂ ಸಾಮಾನ್ಯ ವಿಷಯವೇ. ಅದಕ್ಕೆ ಅನುಮಾನ ಅವಮಾನಗಳು ಸಹ ಬೇಡ. 'ವಿವಾಹ ಸಂಬಂಧವು ಜನ್ಮ ಜನ್ಮಾಂತರಗಳಿಗೂ ಬಿಟ್ಟದ್ದಲ್ಲ' ಎಂದು ಕೇಕೆ ಇಡುವವನ ಹೆಂಡತಿಗೆ ಒಂದು ಚಿಕ್ಕ ಚುಕ್ಕೆ ತೊನ್ನು ಬರಲಿ, ಮಕ್ಕಳು ಹುಟ್ಟದೆ ಹೋಗಲಿ, ಅಷ್ಟೇ ಏಕೆ- ಮಾವನು ತಾನು ಬೇಡಿದಷ್ಟು ಹಣವನ್ನು ಮಾತ್ರ ಕೊಡದೆ ಹೋಗಲಿ, ಜನ್ಮ ಜನ್ಮಾಂತರಗಳಿಗಾಗೇರ್ಪಟ್ಟ ಆ ಧರ್ಮಸಂಬಂಧಕ್ಕೆ ಅಂದೇ ಕಾಟು! ಆಕೆಯು

ಮಹಾಭಾರತದ ನಮೂನೆ,

ಇಲ್ಲಿಯೇ ವಿರಹದಿಂದ ಸುಡುವಾಗ ಮುಂದಿನ ಜನ್ಮಗಳಲ್ಲಿಯೂ ಇದೇ ಸಂಬಂಧವಾದರೆ ಮತ್ತೆ ಗತಿಯೇನು? ಈತನಿಗಾದರೋ ಪರವಾ ಇಲ್ಲ- ತಾನು ಸಾಯುವ ವರೆಗೆ ಎಷ್ಟೋ ಮದುವೆಗಳನ್ನು ಮಾಡಿಕೊಳ್ಳಬಹುದು. ತಾನು ಮುದುಕನಾದರೂ ಹರೆಯದ ಹುಡುಗಿಯನ್ನು ಬಿಗಿದು ಮದುವೆ ಮಾಡಿಕೊಳ್ಳಬಹುದು. ಗಂಡಸು ಹೀಗಿರುವನಾದರೂ ನಿಂದೆ ಬಡ ಹೆಂಗಸಿನ ಪಾಲಿಗೇ! ಕಬೀರನಂಥ ಕ್ರಾಂತಿಪ್ರಿಯ ಸಾಧುವು ಸಹ ಹೆಂಗಸನ್ನು ಕುರಿತು ಹಿಂದಿನವರ ರೋದನವನ್ನೇ ಹಾಡಿದ್ದಾನೆ:-

" ಮಾತಾರೋವೆ ಯಾಸೋಮಾಸೋ ಬಹೆನ್ ರೋವೆ ಬಾರೋ ಮಾಸ್ ।
ಫುರ್‌ಕಿ ಜೋರೂ ತೀನ್ ದಿನ ರೋವೆ ಘೂಂಡೇ ದುಸರಾ ಯಾರ್ ॥ "

(ಸತ್ತರೆ) ತಾಯಿಯು ಸದಾ ಅಳುತ್ತಾಳೆ, ಅಕ್ಕತಂಗಿ ಹದಿನೆರಡು ಮಾಸ ಅಳುತ್ತಾರೆ. ಮನೆ ಹೆಂಡತಿಯೋ ಮೂರು ದಿನವೇ ಅತ್ತು ಬಿಟ್ಟು ಆ ಮೇಲೆ ಇನ್ನೊಬ್ಬನನ್ನು ಹುಡುಕತೊಡಗುತ್ತಾಳೆ- ಎಂದಿವನ ಮತ! ಇದು ವಿಚಾರವೋ ಬರೇ ಉದ್ಗಾರವೋ? ಹೆಜ್ಜೆ ಹೆಜ್ಜೆಗೂ ಇಂಥ ಮಹಾನುಭಾವರ ನಡೆನುಡಿಗಳನ್ನೇ ನೋಡಿ ನಡೆಯುವ ಆಡಿ ಮಾಡುವ ಜನಸಮುದಾಯದ ರೀತಿನೀತಿಗಳು ಸ್ತ್ರೀ ಸಂಬಂಧವಾಗಿ ಹೇಗಿರಬೇಕು ಮತ್ತೆ? ಹೀಗೆ ಸ್ಥಿತಿಯಿರುವಾಗ ದೇಶದ ಸ್ಥಿತಿಗತಿಯು ಹೇಗಿರಬೇಕೆಂಬದನ್ನು ಯಾರೂ ಊಹಿಸಬಹುದು. **ತಾಯಿಯೇ ದಾಸಿ ಬಾನಸಿ ಬಿಕನಾಸಿ ಎಂದಿರುವಲ್ಲಿ ತಾಯಿ ನಾಡೋ ಮತ್ತೆ?**

ಗಂಡಸಿಗೆ ಹೆಂಗಸನ್ನು ಕುರಿತು ಎರಡು ಹಾದಿಗಳು ತೆರೆದಿದ್ದವು:- (೧) ಪ್ರಕೃತಿಯು ಸಂಸಾರದಲ್ಲಿ ಆಕೆಯ ಮೇಲೆ ಹೊರಿಸಿದ ಹೆಚ್ಚಿನ ಭಾರವನ್ನು ತನ್ನ ಪ್ರೇಮಜ್ಞಾನ ಸಾಹಸಗಳಿಂದ ಹಗುರಗೊಳಿಸುವದು. (೨) ಆಕೆಯ ಆ ನೈಸರ್ಗಿಕ ಕಷ್ಟ ನಷ್ಟ

ಅನನುಕೂಲತೆಗಳನ್ನೇ ತನಗನುಕೂಲವಾಗಿ ಮಾಡಿಕೊಂಡು ಅಂಥ ಪಾಮರ ಸ್ಫೂರ್ತಿಯಿಂದ ಆಕೆಯನ್ನು ಕೇವಲ ಸೇವಾವಿಲಾಸ ಯಂತ್ರವನ್ನಾಗಿಟ್ಟುಕೊಂಡು ಪಾತಾಳಕ್ಕಿಳಿಸುವದು. ದೇವಧರ್ಮ ಪ್ರಿಯ ಗಂಡಸು ಯಾವ ಹಾದಿಯಲ್ಲಿದ್ದಾನೆ?

---

## ೫ನೆಯ ಪ್ರಕರಣ.

# ನಿಸರ್ಗ ಮತ್ತು ಕೃತ್ರಿಮತೆ.

ಸಾರ್ವತ್ರಿಕ ಕೃತ್ರಿಮ ಜೀವನವು ಯಥಾರ್ಥ ಜೀವನವಲ್ಲ. **ಯಥಾರ್ಥತೆಯು ಇಲ್ಲದಿರುವಲ್ಲಿ ಜೀವಿತವು ಸದಾ ಸಂಶಯಾತ್ಮಕವೇ, ಕೆಲಸವು ಬಿಟ್ಟಿಯೇ, ಸುಖವೆಂಬದು ಒಣ ಕಲ್ಪನೆಯ ಸಮಾಧಾನವೇ.** ಈ ಕೃತ್ರಿಮತೆಗೆ ನಿಸರ್ಗದೊಡನೆ ಹೊಂದಿಕೆಯು ಬುಡದಲ್ಲಿಯೂ ಇಲ್ಲ ಕೊನೆಯಲ್ಲಿಯೂ ಇಲ್ಲ. ಬಿಡಿಯಾಗಿಯೂ ಇಲ್ಲ ಇಡಿಯಾಗಿಯೂ ಇಲ್ಲ. ಈ ದಿನದ ಅನೈಸರ್ಗಿಕ ನಿರೋಧಗಳಿಗೆ ನಾಳೆಯಾದರೂ ಸುಖವು ಲಭಿಸುವದಾದರೆ ಕಷ್ಟಪಟ್ಟರೂ ಪರವಾ ಇಲ್ಲ. ಯಾಕೆಂದರೆ ಇಂಥ ಸಂಯಮಗಳ ಉದ್ದೇಶ ಒಟ್ಟಾರೆ ಹೆಚ್ಚಿನ ಸುಖವನ್ನು ಪಡುವದೇ. ಇದು ನೈಸರ್ಗಿಕವೇ ಅಲ್ಲವೆ? ಅದರ ಉಪಾಯಗಳು ಸಜ್ಞಾನವಾಗಿಲ್ಲದಿರಬಹುದು. **ಉಪಾಯಗಳು ಅವನ್ನು ತೆಗೆಯುವವರ ಮತ್ತು ಅವರ ಕಾಲದ ಜ್ಞಾನಾನುಭವಪ್ರಮಾಣ ಮತ್ತು ಅವಸರಾವಶ್ಯಕತೆಗಳನ್ನು ಅವಲಂಬಿಸಿವೆ ಎಂದು ಹಿಂದೆಯೇ ಹೇಳಿದೆ. ಯುಕ್ತಿಯೊಂದೇ ಅಲ್ಲ ಅವುಗಳನ್ನು ಪರೀಕ್ಷಿಸುವ ಒರೆಗಲ್ಲು.** ಕರ್ಮರಂಗದಲ್ಲಿ ಪ್ರತಿ ಕಾರ್ಯಕ್ಕೂ ಮೂರು ಭಾಗಗಳಿವೆ. ಉದ್ದೇಶ, ಉಪಾಯ, ಉತ್ಪತ್ತಿ. ಉದ್ದೇಶವು ಮನಸ್ಸಿನಲ್ಲಿಯೇ ಇರುವ

ವಿಷಯ. ಉಪಾಯವು ಮನಸ್ಸಿನಲ್ಲಿ ಹುಟ್ಟಿ ಮುಂದೆ ಕಾರ್ಯರಂಗದಲ್ಲಿ ತೋರಿ ಬರುತ್ತದೆ. ಉತ್ಪತ್ತಿಯು ಕಣ್ಣಿಗೆ ಒಡೆದು ತೋರುತ್ತದೆ. ಮನುಷ್ಯನಲ್ಲಿ ನೈಸರ್ಗಿಕ ಮತ್ತು ಕೃತ್ರಿಮ ವಿಷಯಗಳೆರಡೂ ಇವೆ. ಹೀಗೆಂದೊಡನೆಯೇ ಕೃತ್ರಿಮವೆಲ್ಲ ಹಾಳು ಎಂದೆನ್ನಲಾಗುವದಿಲ್ಲ. ದೃಷ್ಟಾಂತಕ್ಕೆ ಆಹಾರವು ಬೇಕು. ಹಸಿವೆಯನ್ನು ತಣಿಸುವದಕ್ಕೆ ಇದು ನೈಸರ್ಗಿಕ. ಆದರೆ ಅದರ ರೂಪ ರುಚಿಗಳ ಪ್ರೀತಿ ನೈಸರ್ಗಿಕವಲ್ಲ. ಇದು ನಾಗರಿಕತೆಯ ಕೃತ್ರಿಮ ಅಭ್ಯಾಸದಿಂದಲೋ ಹಿಂದಿನ ಅನೇಕ ತಲೆಗಳಿಂದಲೋ ಹುಟ್ಟುಗುಣವಾಗಿ ಬಂದ ಸಂಗತಿ. ಕರ್ಮ ಮಾಡುವಾಗ ಶಕ್ತಿಯ ವೆಚ್ಚವಾಗುತ್ತದೆ. ಈ ವೆಚ್ಚವು ಹಾಗೆಯೇ ನಡೆದರೆ ದೇಹವೇ ಸವೆದು ಹಾಳಾದೀತು. ಅದಕ್ಕಾಗಿ ನಿಸರ್ಗವು ಹಸಿವೆ ಬಾಯಾರಿಕೆಗಳ ಮೂಲಕ ‘ ಭರ್ತಿ ಮಾಡು ’ ಎಂದು ಸೂಚನೆ ಕೊಡುತ್ತದೆ. **ಆಹಾರವು ದೇಹವನ್ನು ಬದುಕಿಸಿ ಬೆಳೆಸಲಿಕ್ಕೆ.** ಆಹಾರದ ರುಚಿ ಮಿಶ್ರಣ ವೈವಿಧ್ಯಗಳು ಈ ನಿಸರ್ಗದ ಉದ್ದೇಶವನ್ನೇ ಪೂರೈಸಿದರೆ ಅವುಗಳ ಕೃತ್ರಿಮತೆಯು ನಿರ್ದುಷ್ಟವಾಗಿಯೇ ಇದೆ. ಯಾಕೆಂದರೆ ಆ ಕೃತ್ರಿಮ **ಉಪಾಯವು ಪ್ರಕೃತಿಯ ಉದ್ದೇಶವನ್ನೇ ಪುಷ್ಟಿಗೊಳಿಸಿ ಪೂರೈಸುತ್ತದೆ; ಅಂದರೆ ನೈಸರ್ಗಿಕ ಉದ್ದೇಶಕ್ಕೆ ತಕ್ಕ ಉತ್ಪತ್ತಿಯನ್ನು ತೋರಿಸುತ್ತದೆ.** ಅದನ್ನು ಬಿಟ್ಟು ರುಚಿ ಮಿಶ್ರಣಗಳನ್ನೇ ಅಂದರೆ ರೂಢಿಯ ಅನ್ನ ಮೇಲೋಗರಗಳನ್ನೇ ಗಮ್ಯವಾಗಿಟ್ಟುಕೊಂಡರೆ?- ಅದು ಕೇವಲ ಕೃತ್ರಿಮತೆಯಾಯಿತು. **ಇದು ಚಾಪಲ್ಯ, ದಾಸ್ಯ, ಪರಾಧೀನತೆಯ ಹಾದಿ. ಅಲ್ಲದೆ ಎಲ್ಲಿ ಕೃತ್ರಿಮತೆಯು ನಿಸರ್ಗದ ಉದ್ದೇಶವನ್ನೇ ಪುಷ್ಟಿಗೊಳಿಸುತ್ತದೋ ತ್ವರೆಯಿಂದ ಕೊನೆಗಾಣಿಸುತ್ತದೋ ಅಲ್ಲಿ ಧರ್ಮದ ವಿಹಂಗಮ ಮಾರ್ಗವಿದೆ.** ಮಾನವನ ಬುದ್ಧಿಯು ಇತರ ಪ್ರಾಣಿಗಳಿಗಿಲ್ಲ. ಆದುದರಿಂದ ಅವು ನಿಸರ್ಗವು ನಡೆಸಿದಂತೆಯೇ ಮೆಲ್ಲ ಮೆಲ್ಲನೆ ಮುಂದಕ್ಕೆ ಸಾಗುತ್ತವೆ. ಇವಕ್ಕೆ ಪಿಪೀಲಿಕಾ ಮಾರ್ಗವೆಂದು ನಮ್ಮ ವೇದಾಂತಿಗಳೆನ್ನುತ್ತಾರೆ.

ನಿಸರ್ಗದ ನೈಜೋಪದೇಶಗಳು

ವಿಕಾಸವು ಸೃಷ್ಟಿಯ ರೀತಿಯೆಂಬುದು ಒಡೆದು ಕಾಣುತ್ತದೆ. ಡಾರ್ವಿನ್‌ನ ಈ ವೊನ್ನೆಯ ಸಿದ್ಧಾಂತವು ನಮ್ಮಲ್ಲಿಯು ಬಹು ಪುರಾತನ ಸಿದ್ಧಾಂತ. "ಯೋನಿ ಲಕ್ಷ ಎಂಭತ್ನಾಲ್ಕರೊಳು ಸಂಚರಿಸಿ ಸರಿದ ನರರಿಂಗೆ ಹರಿಪಾದ ದುರ್ಲಭವೆ? ಎಂದು ನಮ್ಮವರು ಪಾಡಿಲ್ಲವೆ? ಮಾನವನು ಮುಂದು **ಹಕ್ಕಿಯಂತೆ ಹಾರಿ ಗಮ್ಯವನ್ನೈದಬೇಕು ಎಂಬುದೇ ಯುಕ್ತ ಧರ್ಮದ ತಿರುಳು. ಇದೇ ವಿಹಂಗಮ ಮಾರ್ಗ**ವೆಂದರೆ. ಮಾನವನ ಬುದ್ಧಿ ಭಾವನಾ ರಚನಾ ಶಕ್ತಿಗಳಿಂದೇರ್ಪಡತಕ್ಕ ಸಕಲ ವಿಷಯಗಳೂ ಕೃತ್ರಿಮವೇ. ಆದರೆ ಅವು ನೈಸರ್ಗಿಕ ಉದ್ದೇಶ ಉಪಾಯ ಉತ್ಪತ್ತಿಗಳನ್ನೇ ಬೇಗನೇ ಸಾಗಿಸುವವಾದರೆ? ಅವು ಕೃತ್ರಿಮವೆಂದು **ತೋರಿದರೂ** ನೈಸರ್ಗಿಕವೇ ಅಲ್ಲವೆ? **ಯಾವ ಕೃತ್ರಿಮತೆಯಲ್ಲಿ ನಿಸರ್ಗದ ಸ್ಫೂರ್ತಿಗಮ್ಯಗಳಿಲ್ಲವೋ ಅದು ಕೇವಲ ಕೃತ್ರಿಮತೆ, ಅಧರ್ಮ, ವಿನಾಶದ ಹಾದಿ.** ಆಹಾರವನ್ನು ಕುರಿತು ಹೇಳಿದೆವು. ನಿದ್ರಾ ಭಯ ಮೈಥುನಗಳ ವಿಷಯವೂ ಹೀಗೆಯೇ. ಕರ್ಮದಿಂದ ಸೋತ ದೇಹವನ್ನು ನಿರಾಯಾಸಗೊಳಿಸಿ ಮತ್ತೆ ಕರ್ಮಕ್ಕೆ ಹುರಿಗೊಳಿಸುವದಕ್ಕಾಗಿ ನಿದ್ರೆ. ಪ್ರಾಣವನ್ನು ಸಂರಕ್ಷಿಸಿಕೊಳ್ಳುವದಕ್ಕಾಗಿ ಭಯ. ಮೈಥುನದಲ್ಲಿ ಎರಡು ಉದ್ದೇಶಗಳಿವೆ. ವ್ಯಕ್ತಿಯ ಸುಖ ಒಂದು, ವರ್ಗದ ವೃದ್ಧಿ ಇನ್ನೊಂದು. ಎಲ್ಲವುಗಳ ಸಾರಾಂಶವನ್ನು ನೋಡಿದರೆ ಹೀಗಿದೆ:- ಪ್ರಕೃತಿಯ ತಿರುಳು ಸುಖ, ಉದ್ದೇಶವು ಪ್ರಗತಿ, ವಿಕಾಸ, ಅದರ ರೀತಿಯು ಕರ್ಮ. ಈ ಕರ್ಮವು ಉತ್ಪತ್ತಿಯ ದೃಷ್ಟಿಯಿಂದ ಎರಡು ವಿಧವಾದದ್ದು- ಪಿಪೀಲಿಕಾ, ವಿಹಂಗಮ. ಮಾನವನಿಗೆ ಬುದ್ಧಿ ಭಾವನಾ ರಚನೆಗಳಿರೋಣದಿಂದ ಆತನಿಗೆ ವಿಹಂಗಮ ಮಾರ್ಗವೇ ಯುಕ್ತ ಧರ್ಮ. ಅಂದ ಮೇಲೆ **ಯಾವ ಕಾರ್ಯದಿಂದ ವ್ಯಕ್ತಿ ವರ್ಗಗಳಿಗೂ ವಿಹಂಗಮವಾದ ಹಿತವಿಕಾಸವಿಲ್ಲವೋ ಅದು ಅಧರ್ಮವೆಂದು ಸಯುಕ್ತಿಕವಾಗೀಗ ಹೇಳಬಹುದಲ್ಲವೆ?**

ನೈಸರ್ಗಿಕ ಜೀವನವು ಯಾವದು ಕೃತ್ರಿಮ ಜೀವನವು ಯಾವದು ಎಂಬದನ್ನು ಸ್ವಲ್ಪ ವಿಮರ್ಶಿಸುವ. ನೈಸರ್ಗಿಕ ಜೀವನದ ಕೂಗು

ಈಗ ಪಶ್ಚಿಮದಲ್ಲಿ ಬಹಳವಾಗಿ ಎದ್ದಿದೆ. ಅದನ್ನು ನಮ್ಮವರೂ ಹಾಗೆಯೇ ಅಂಗೀಕರಿಸುತ್ತಾರೆ! ಅಲ್ಲಿಂದ ಏನು ಎದ್ದು ಬಂದರೂ ನಮಗದು ಪ್ರತ್ಯಕ್ಷ ದೇವದರ್ಶನವೇ! ಸರ್ ಜೊನ್ ವುಡ್ ರೊಫ್ ಎಂಬ ತಂತ್ರಸಾರ ಪಂಡಿತನು ಅಂಥ ಮನೋಗತಿಯುಳ್ಳವರನ್ನು ಪಾಶ್ಚಿಮಾತ್ಯರ 'ಮಾನಸ ಪುತ್ರರು' ಎಂದು ಕರೆದುಬಿಟ್ಟಿದ್ದಾನೆ. ಆಹಾರ ಮತ್ತು ಆರೋಗ್ಯ ಸೂತ್ರ ಇವುಗಳ ವಿಷಯದಲ್ಲಿ ನಿಸರ್ಗದ ಮಂತ್ರವು ಎಲ್ಲೆಲ್ಲಿಯೂ ಉಚ್ಚರಿಸಲ್ಪಡುತ್ತಿದೆ. ಆಹಾರವು ನೈಸರ್ಗಿಕವಾಗಿದ್ದರೆ ರೋಗ ಬರುವದಿಲ್ಲ. ರೋಗ ಬಂದರೆ ಚಿಕಿತ್ಸೆಯು ನೈಸರ್ಗಿಕವಾಗಿರಬೇಕು; ಆಗ ರೋಗವು ವಾಸಿಯಾಗದೆ ಇರುವದಿಲ್ಲ– ಎಂದು ಅವರ ಉಪದೇಶ. ಅದು ಅಲ್ಲಿಯೇ ನಿಂತರೆ ಚಿಂತೆಯಿಲ್ಲ. ಇತರ ಎಲ್ಲ ರೀತಿಗಳೂ ತಪ್ಪು ಎಂದು ಕೂಡ ಅವರು ಸಾಧಿಸಲು ಯತ್ನಿಸುತ್ತಾರೆ. ಸಾಕಷ್ಟು ವಿವೇಚನೆಯಿಲ್ಲದಲ್ಲಿ ಅವರ ಉಪದೇಶವು ನ್ಯಾಯವೆಂದೂ ತೋರುತ್ತದೆ. ನಾನು ಅದು ಒಪ್ಪು ಎಂದೂ ಹೇಳುವದಿಲ್ಲ ತಪ್ಪು ಎಂದೂ ಹೇಳುವದಿಲ್ಲ. ಕೆಲವು ವಿಷಯಗಳನ್ನು ಮಾತ್ರ ಬಿಡಿಸಬೇಕೆಂಬುದೇ ನನ್ನ ಇಚ್ಛೆ.

ಅಯುಕ್ತ ನಿಸರ್ಗವಾದ

ಅವರಿಗೆ ನಿಸರ್ಗವೆಂದರೆ ಪ್ರಾಣಿ ಸಾಮಾನ್ಯಗಳ ಸ್ಥೂಲ ರೀತಿ. ಅವುಗಳನ್ನು ನೋಡಿ ಅವುಗಳಂತೆಯೇ ನಾವೂ ಇರಬೇಕೆಂದು ಇವರೆನ್ನುವದು. ಮಾನವನೂ ಕೇವಲ ಪ್ರಕೃತಿಯ ಒತ್ತಾಯದಂತೆಯೇ ಹೋಗಬೇಕೋ? ಇದು ಸಂಘದಲ್ಲಿ ಸಾಧ್ಯವೋ? ಯೋಗ್ಯವೋ? ಮಿಕ್ಕ ಪ್ರಾಣಿಗಳಿಗೆ ಬುದ್ಧಿ ವಿವೇಕಗಳಿಲ್ಲ; ಮಾನವನೂ ಬುದ್ಧಿಗೆ ಬಹಿಷ್ಕಾರ ಹಾಕಬೇಕೋ? ಅವುಗಳ **ಸ್ಥೂಲವ್ಯಾಪಾರಗಳನ್ನೇ ನಾವು ಅನುಸರಿಸಬೇಕೋ, ಅಥವಾ ಅವುಗಲ್ಲಿ ಅಡಕವಾಗಿದ್ದು ನಮ್ಮ ಸ್ಫುಟ ಬುದ್ಧಿಗೆ ತೋರುವ ರೀತಿಪ್ರಗತಿಸೂತ್ರಗಳನ್ನು ಮಾತ್ರ ಅವಲಂಬಿಸಬೇಕೋ ?** ಮೇಲ್ಪಂಕ್ತಿಯನ್ನು ಅವುಗಳ ರಟ್ಟಿನಲ್ಲಿ ಕಾಣಬೇಕೋ ಗುಟ್ಟಿನಲ್ಲಿ ಹುಡುಕಬೇಕೊ? ಅಲ್ಲದೆ ಸಂಪೂರ್ಣ ಅನುಕರಣವು

ರಟ್ಟೋ ಗುಟ್ಟೋ?

ಸಾಧ್ಯವೋ? ದೃಷ್ಟಾಂತಕ್ಕೆ ಮಲಮೂತ್ರಗಳ ಒತ್ತಾಯವು ಆದೊಡನೆಯೇ ಅವುಗಳು ಸ್ಥಾನಮಾನವಿಲ್ಲದೆ ವಿಸರ್ಜಿಸುತ್ತವೆ. ವ್ಯಕ್ತಿಯು ಹಾಗೆ ಮಾಡುವದುತ್ತಮವೆಂದು ಆರೋಗ್ಯಶಾಸ್ತ್ರವೂ ಹೇಳುತ್ತದೆ. ಆದರೂ ಸಂಘಜೀವಿಗಿದು ಸದಾ ಸಾಧ್ಯವೋ? ಯೋಗ್ಯವಾಗಿರುವದನ್ನು ಸಾಧ್ಯವಾಗುವಂತೆಯೂ ಮಾಡುವದೊಂದು ಗಮ್ಯವೇ. ಆದರೆ ಅದರಲ್ಲಿಯೂ ಯೋಗ್ಯವಾದುದರ ಸ್ಥೂಲರೂಪರೀತಿಯನ್ನೇ ಸಾಧಿಸಲು ಯತ್ನಿಸಬೇಕಾಗಿಲ್ಲ. **ಅದರ ಉದ್ದೇಶವನ್ನೂ ಸಾರವನ್ನೂ ಸಂಘಕ್ಕಪಾಯವಿಲ್ಲದೆ ಕೈಗೂಡಿಸಿಕೊಳ್ಳುವದೇ ಬುದ್ಧಿಯ ಕರ್ತವ್ಯ.** ನೈಸರ್ಗಿಕ ಚಿಕಿತ್ಸೆಯಲ್ಲಿ ಬಹಳ ಅಭಿಮಾನವುಳ್ಳ ಒಬ್ಬ ಡಾಕ್ಟರನು ಒಮ್ಮೆ ನಾನು ಒಬ್ಬ ರೋಗಿಗೆ ಚಿಕಿತ್ಸೆಯನ್ನುಪದೇಶಿಸುವದನ್ನು ಕಂಡು 'ನಿಮ್ಮ ಜಲಚಿಕಿತ್ಸೆಯ ಲೇಖಗಳನ್ನು ನಾನು ಕಲಕತ್ತೆಯಲ್ಲಿದ್ದಾಗ ನೋಡಿ ನನಗೆ ನಿಮ್ಮಲ್ಲಿ ಬಹಳ ಗೌರವವು ಹುಟ್ಟಿತು. ಆದರೆ ನೀವು ಈ ಅನೈಸರ್ಗಿಕ ರೀತಿಯನ್ನುಪದೇಶಿಸುವದನ್ನು ಕಂಡು ಆ ಗೌರವವು ಸಡಿಲುಗೊಳ್ಳುತ್ತಿದೆ' ಎಂದನು. ನಾನದಕ್ಕೆ 'ಇದು ಅನೈಸರ್ಗಿಕವೆಂದು ಹೇಗೆ ತಿಳಿಯಿತು?' ಎಂದೆ. 'ನೈಸರ್ಗಿಕವೆಂದರೇನು?' ಎಂದು ಕೇಳಿದೆ. ಅದಕ್ಕವರು 'ನೀರು, ಉಪವಾಸ, ಬಸ್ತಿ, ಮುಂದೆ ಆಹಾರಕ್ಕೆ ಹಾಲು, ಮಜ್ಜಿಗೆ, ಗೋದಿ, ಹಣ್ಣುಹಂಪಲು ಇವುಗಳ ಮೂಲಕವಾಗಿಯೇ, ರೋಗವನ್ನು ತೆಗೆದುಹಾಕಬೇಕು.' ಎಂದರು. ನಾನೆಂದೆ 'ಉಪವಾಸ ತಕ್ಕಮಟ್ಟಿಗೇನೋ ಪ್ರಾಣಿಗಳು ಮಾಡುವದನ್ನು ಕಾಣಬಹುದು; ಬಸ್ತಿ- ಎಲ್ಲಿಯೋ ಒಂದೆರಡು ಪ್ರಾಣಿಗಳು ಮಾಡುತ್ತವಂತೆ; ನಾನಂತೂ ನೋಡಲಿಲ್ಲ; ಹಾಗೆನ್ನುವವರು ನೋಡಿದಂತೆಯೂ ತೋರುವದಿಲ್ಲ. ನೀರು– ಸರಿಯೇ ಅದು ನೈಸರ್ಗಿಕವೇ; ಆದರೂ ಪ್ರಾಣಿಗಳು ಅದನ್ನು ಬಾಯಾರಿಕೆಗಾಗಿ ಕುಡಿದದ್ದು ಕಾಣುತ್ತದೆಯೇ ಹೊರತಾಗಿ ಚಿಕಿತ್ಸೆಗಾಗಿ ಧಾರಾಳವಾಗಿ ಕುಡಿದದ್ದು ಮಿಂದದ್ದು ಕಾಣುವದಿಲ್ಲ. ಹಾಲು ಮಜ್ಜಿಗೆ- ಇವುಗಳ ಸೇವನೆ ನೈಸರ್ಗಿಕವೆಂದು ಹೇಳಲಿಕ್ಕೆ ಸಾಕಷ್ಟು ಯುಕ್ತಿಯಿಲ್ಲ; ನೈಸ

ರ್ಗಿಕವಾಗಿ ಇತರ ಪ್ರಾಣಿಯ ಹಾಲನ್ನು ಕುಡಿಯುವವು ಎಲ್ಲಿಯೂ ಕಾಣುವದಿಲ್ಲ. ಗೋದಿ, ಕಾಯಿ, ಹಣ್ಣು ಹಂಪಲ- ಇವು ಮನುಷ್ಯನು ಮಾಡಿದ ಹೊಲ ತೋಟಗಳಲ್ಲಿಯೇ ಆಗುತ್ತವೆ; ಅಲ್ಲದೆ ಕಾಡಿನಲ್ಲಿ ಬೆಳೆಯುವದಿಲ್ಲ; ಇಲ್ಲಿ ಕೃತ್ರಿಮ ರೀತಿಯಿಂದ ಬೆಳೆಸಿದ ಧಾನ್ಯ ಹಣ್ಣು ಹಂಪಲುಗಳನ್ನೇ ಲೂಯಿಕೂನ್, ಎಡೋಲ್ಫ್ ಜಸ್ಟ್, ಬೆನೆಡಿಕ್ಟ್‌ಲಸ್ಟ್, ಲಿಂಡ್‌ಲೇರ್, ಮೆಕ್‌ಫೆಡೆನ್ ಮುಂತಾದ ನೈಸರ್ಗಿಕ ಜೀವನಾಭಿಮಾನಿಗಳೂ ಡಾಕ್ಟರರೂ ಉಂಡು ಉಪದೇಶಿಸುತ್ತಾರೆಯೇ ಹೊರತು, ಕಾಡಿನ ಪಾಪಸು, ಕಳ್ಳಿಹಣ್ಣು, ಮುಳ್ಳು ರಾಜಗೀರಿ, ಧಾನ್ಯ ಮುಂತಾದವನ್ನು ತಿಂದಿರು ಎಂದು ಯಾರೂ ಹೇಳುವದಿಲ್ಲ. ಅವರು ಒತ್ತಿ ಉಪದೇಶಿಸುವ ನಿಂಬೆ, ಸಿಹಿ ನಿಂಬೆ, ದ್ರಾಕ್ಷೆ, ದಾಳಿಂಬ ಮುಂತಾದ ಹಣ್ಣುಗಳು ಮನುಷ್ಯನ ಕೃತ್ರಿಮ ಉಪಾಯಗಳಿಂದಲೇ ಹುಟ್ಟುತ್ತವೆ. ಇದಕ್ಕೆ ಉತ್ತರವು ದೊರೆಯಲಿಲ್ಲ. ಸಾರಾಂಶ ಮನುಷ್ಯನು ನಿಸರ್ಗದಿಂದ ಬಹಳ ದೂರನಾಗಿದ್ದಾನೆ. ಆತನ **ಬುದ್ಧಿಯು ನಿಸರ್ಗದ ಉದ್ದೇಶವನ್ನೂ ತತ್ತ್ವವನ್ನೂ ಕಂಡು ಹಿಡಿದು ಪೂರೈಸಬೇಕು.** ಉಪಾಯವು ಕೃತ್ರಿಮವಾಗಿದ್ದರೂ ಜೀವಿತವು ತತ್ತ್ವತಃ ನೈಸರ್ಗಿಕವೇ ಆಗಿದೆಯೆಂದೆನ್ನಬೇಕು. ಉದ್ದೇಶ ಉತ್ಪತ್ತಿಗಳೆರಡೂ ನಿಸರ್ಗದಂತೆಯೇ ಕೊನೆಗಾಣುತ್ತವೋ ಇಲ್ಲವೊ ಎಂಬದನ್ನು ನೋಡಬೇಕು. ಇದೇ ಮುಖ್ಯ.

ಇವೆರಡೇನೂ ತಕ್ಕ ಮಟ್ಟಿಗೆ ಲಭಿಸಿದವು. ಆದರೂ ಇವುಗಳನ್ನು ಪೂರೈಸುವ ಶಕ್ತಿಯು ಉಪಾಯಕ್ಕಲ್ಲವೇ ಸೇರಿದೆ? ಅದೂ

**ಉಪಾಯ ಜ್ಞಾನವೂ ಬೇಕು.**

ವಿಕಾಸ ಹೊಂದುತ್ತ ಹೋಗಬೇಕು. ಶುದ್ಧವಾಗುತ್ತ ಹೋಗಬೇಕು. ಉಪಾಯಗಳು ಬದಲಾಗುತ್ತವೆ. ಬದಲಾಗಲೇಬೇಕು. ಮತ್ತು ಧರ್ಮವೆಂದರೆ ಇಂಥ ಉಪಾಯಗಳ ಸರಣಿಯೇ. **ವ್ಯಕ್ತಿ ಸಂಘಗಳ ಸುಖವೆಂಬ ಮೂಲೋದ್ದಿಶ್ಯವನ್ನು ಕಳೆದುಕೊಳ್ಳದಿರಬೇಕಾದರೆ ಧರ್ಮವು ತನ್ನ ತಿರುಳನ್ನು ಮರೆಯಬಾರದು.** ದೇಶ **ಕಾಲ ಪರಿಸ್ಥಿತಿಯೊಡನೆ ಹೊಂದಲೇ ಬೇಕು.**

ಸ್ವಾಸ್ಥ್ಯಸುಖ ಸಮಾಧಾನಕ್ಕಾಗಿ ಸಂಘಕ್ಕಾಗಿ ದೇವಧರ್ಮ ಗಳು ತಕ್ಕ ಕಾಲದಲ್ಲಿ ವರ್ತಿಸಿದವರೆಗೆ ಕುಂದುಕೊರತೆಗಳು ಎಲ್ಲಿ ಯಾದರೂ ಇದ್ದರೆ ಅವು ಉಪಾಯಮಾತ್ರಗಳಲ್ಲಿದ್ದವು. ಆದರೆ ಜೀವಿಯ ಸತ್ಕಾರ ಅತ್ಯಭಿಲಾಷೆ ಸ್ವಾರ್ಥಪ್ರಿಯ ಪ್ರಕರಣವು ಎಂದು ಮೊದಲಾಯಿತೋ ಅಂದಿನಿಂದ ಅದು ಇವುಗಳನ್ನು ಸಜ್ಜು ಗೊಳಿಸುವವದನ್ನು ಬಿಟ್ಟು, **ಅವನ್ನೇ ಆಧಾರವಾಗಿಟ್ಟುಕೊಂಡು ಅವುಗಳ ಮೇಲೆ ಇನ್ನೂ ವಿಕಾರವಾದ ಸೆರೆಮನೆಯನ್ನು ಕಟ್ಟಿತು.** ಉಪಾಯಗಳಲ್ಲಿ ಲೋಪವಿದ್ದರೂ ಮೊದಲನೆಯ ಭಾಗ ದಲ್ಲಿ ಸಂಘದ ಅಭಿಮಾನಕ್ಕೇನೂ ಕಡಿಮೆಯಿರಲಿಲ್ಲ. ಈ ಪ್ರಕರ ಣದಲ್ಲಿಯೋ ಮೊದಲನೆಯದಕ್ಕೆ ಮೊದಲು ವ್ಯಕ್ತಿಯು ಹೇಗೆ ಪಶು ವಿನಂತೆ ತನ್ನ ಸುಖಕ್ಕಾಗಿಯೇ ಬಾಳುತ್ತಿದ್ದನೋ ಮನಸ್ಸು ಹಾಗೆ ಬಾಳೋಣವೇ ವಿಶೇಷ. ಎರಡನೆಯ ಕಾಲದಲ್ಲಿ ಏರ್ಪಟ್ಟ ಸಂಘದ ಸಹಾಯ ಪೋಷಣಗಳನ್ನು ತನ್ನ ಢಾಲಾಗಿ ತನ್ನ ಬಲವಾಗಿ ಇಟ್ಟುಕೊಂಡು ವ್ಯಕ್ತಿಯು ಬಾಯಿಯಿಂದ ಸಮಾಜವನ್ನು ಜಪಿಸುತ್ತ ಮನಸ್ಸಿನಿಂದ ಕಾರ್ಯತಃ ಅದರ ವೈರಿ ಯಾಗಿಯೇ ಜೀವಿಸುತ್ತಿದ್ದಾನೆ. ಅದರಿಂದ ಸಂಘವು ಸಡಿಲಾಗುತ್ತ ದುರ್ಬಲವಾಗುತ್ತ ಕೊರಗುತ್ತಿದೆ ಸೊರಗುತ್ತಿದೆ. ಮಾನವ್ಯದ ಇತಿ ಹಾಸಕ್ಕೆ ಮೂರು ಅವಧಿಗಳು (೧) ವ್ಯಕ್ತಿಯು ತನ್ನಷ್ಟಕ್ಕೇ ತನ್ನ ಸುಖಕ್ಕಾಗಿಯೇ ಬಾಳಿದ್ದು (೨) ವ್ಯಕ್ತಿಯು ಈ ರೀತಿಯ ಅಪಾಯ ವನ್ನು ಕಂಡು ಸಂಘವನ್ನೇರ್ಪಡಿಸಿದ್ದು ಮತ್ತು ಒಟ್ಟಾರೆ ಎರಡರ ಸುಖಪ್ರಗತಿಗಳಿಗಾಗಿಯೂ ದುಡಿದದ್ದು. (೩) ಎರಡನೆಯ ಅವಧಿಯ ಲಾಭಗಳನ್ನು ಮಾತ್ರ ಭೋಗಿಸುತ್ತ ಅತ್ಯಭಿಲಾಷೆಯಿಂದ ಸಂಘ ಸೇವೆಯನ್ನೇ ಬಿಟ್ಟು ವ್ಯಕ್ತಿಯು ಸ್ವಾರ್ಥವನ್ನೇ ಸಾಧಿಸುತ್ತಿರುವದು. ಮೊದಲನೆಯದು ಕೇವಲ ನೈಸರ್ಗಿಕ. ಎರಡನೆಯದು ಕೃತ್ರಿಮ ನೈಸರ್ಗಿಕಗಳ ಹೊಂದಿಕೆಯ ಪ್ರಯತ್ನ. ಮೂರನೆಯದಿದು ಪ್ರಧಾ ನವಾಗಿ ಕೃತ್ರಿಮವೇ, ಬಹು ಸೂಕ್ಷ್ಮ ವಿನಾಶ ಮಾರ್ಗವೇ ಇದು.

**ಮೂರು ಕಾಲಗಳು**

---

# ೬ನೆಯ ಪ್ರಕರಣ

## ಅಧೋಗತಿ

ಈ ಕೇವಲ ಸ್ವಾರ್ಥಪರ ಸಂಘ ಜೀವನದಿಂದ ಜನಾಂಗಕ್ಕಾದ ಅನಾಹುತಗಳನ್ನು ಅಷ್ಟಿಷ್ಟೆಂದು ಹೇಳುವದು ಕಷ್ಟ; ವ್ಯಕ್ತಿಯ ಸ್ವಾರ್ಥಪರ ಜೀವನದಿಂದ ಮೊದಲು ಮೊದಲು ಅವನಿಗೆ ಸರಿಸಮಾನರಾಗಿರುವವರಿಗೆ ತೊಂದರೆಯಾಗುವದಿಲ್ಲ. ಬುದ್ಧಿಯಲ್ಲಿ ಇವನಿಗಿಂತ ಕಡಿಮೆಯಾಗಿರುವವರು ಅಥವಾ ದೇಹಬಲದಲ್ಲಿ ಕಡಿಮೆಯಾಗಿರುವವರು ಮಾತ್ರ ಮೊದಲು ಈ ಕ್ಷುದ್ರ ಸ್ವಾರ್ಥಕ್ಕೆ ಬಲಿ ಬೀಳುವವರು. ಅವರು ಹಾಗೆ ಪರಾಧೀನತೆಗೆ ಬೀಳುವದಕ್ಕೆ ಎರಡು ಕಾರಣಗಳಿವೆ. (೧) ಅವರಿಗೆ ಬುದ್ಧಿ ಕಡಿಮೆಯಾಗಿರುವಂತೆ ಕುರುಡು ನಂಬಿಕೆ ಹೆಚ್ಚಾಗಿರುವದು (೨) ಈತನಿಗೆ ಬುದ್ಧಿಯು ಹೆಚ್ಚಾದಂತೆ ಕಲ್ಪನಾ ಶಕ್ತಿಯೂ ಹೆಚ್ಚುವದು. ಈತನಿಗೆ

**ಕಲ್ಪನೆಯ ಮೂಲ**

ತನ್ನ ಸ್ವಾರ್ಥಪರಜೀವನದಿಂದಾಗುವ ಅನ್ಯಾಯವು ಗೊತ್ತಾದರೂ **ತನಗೆ ಬಂದ ಅನುಕೂಲತೆಗಳೂ ಧಾರಾಳವಾಗಿರೋಣದರಿಂದ ಅವನ್ನಿವನು ಬಿಡಲಿಚ್ಛಿಸುವದಿಲ್ಲ.** ಅವುಗಳನ್ನೊದಗಿಸಿಕೊಡುವರನ್ನೂ ಬಿಗಿಯತೊಡಗುತ್ತಾನೀಗ. ಹೀಗೆ ಬಿಗಿಯುವ ಪ್ರಯತ್ನದಲ್ಲಿ ಈತನ ಕಲ್ಪನಾಸೃಷ್ಟಿಯ ಮೂಲವು ಪ್ರಾರಂಭವಾಗುತ್ತದೆ! ಅವರು ಸರಳವಾಗಿ ಈ ವಿಷಯಿಗೆ ಬಗ್ಗಿಕೊಂಡಿದ್ದು ದುಡಿಯುವವರೆಗೆ ಈತನ ಈ ಸೃಷ್ಟಿಗೆ ಕಾರಣವಿಲ್ಲ, ಹುರುಪಿಲ್ಲ. ಆದರೆ ಸ್ತ್ರೀ ಶೂದ್ರರು ನಿರ್ಜೀವ ಯಂತ್ರಗಳಲ್ಲವಷ್ಟೇ? ಅವರಿಗೂ ಆಶೆಗಳಿವೆ. ಅವು ಅಷ್ಟು ಹೆಚ್ಚಾಗಿಲ್ಲವಾದರೂ– ಇವೆ. ಈತನ ಲಾಂಪಟ್ಯವು ಎಂದಾದರೊಮ್ಮೆ ಅವರ ಆ ಚಿಕ್ಕಪುಟ್ಟ ಆಶೆಗಳಿಗೂ ಅಡ್ಡ ಬಂದೇ ತೀರಬೇಕು. ಆಗ ಸಹಜವಾಗಿಯೇ ಅವರು ಅಸಂತೋಷವನ್ನು ತೋರಿಸಿದರೆ ಕಾಮುವಿಷಯಿಯಾದವನಿಗೆ ಮೊದಲು ಬರುವದು ಕ್ರೋಧವೇ. ಈ ಕ್ರೋಧಾವೇಶಕ್ಕೆ, ಕೈಲಾಗದವರು ಬಗ್ಗು

ವದೂ ಸಹಜವೇ. ಅವರಿಗೆ ಈತನನ್ನು ಬಿಟ್ಟರೆ ಗತಿಯಿಲ್ಲ. ಭಯ ಒಂದು ಕಡೆ; ಮೊದಲಿನಿಂದ ಪ್ರಪಂಚದ ಅನುಭವವಿಲ್ಲದಿರುವದ ರಿಂದ ಏಕಾಕಿಯಾಗಿ ಹೊರಬಿದ್ದರೆ ಏನಾಗುವುದೊ ಎಂಬ ಸಂದೇಹ. ಹೀಗೆ ತಮ್ಮ ಭಯ ಸಂದೇಹಗಳಿಗಾಗಿಯೇ ಆತನ ಕ್ರೋಧಾವೇಶ ವನ್ನೂ ದೌರ್ಜನ್ಯವನ್ನೂ ಸಹಿಸುತ್ತ, ಬರಬರುತ್ತ ಅಭ್ಯಾಸದಿಂದ ಅವನಿಗೇ ಅಂಟಿಕೊಂಡಿರುತ್ತಾರೆ. ಈ ಭಯಸಂದೇಹಗಳಿಂದಲೇ

ಉಪಾಯ

ಮೊದಲು ದೇವಧರ್ಮಗಳ ರಚನೆಯಾಯಿತು, ಅವುಗಳಿಗೆ ಬಗ್ಗೋಣವಾಯಿತು ಎಂದು ಹೇಳಿಯೇ ಇದೆ. ಸ್ವಾರ್ಥ ಸತ್ಕಾರಪ್ರಿಯ ಯುಗದಲ್ಲಿ ಬಡಬಗ್ಗರ, ಬಹು ಕಾಲದಿಂದ ಬಂದ, ದುರ್ಬಲ ಮನೋಗತಿಯ ಲಾಭವನ್ನು ವಿಷಯಿಗಳು ಚನ್ನಾಗಿ ಸೂರೆ ಮಾಡುತ್ತಾರೆ. ಹೇಗೆಂದರೆ- ಈ ರೀತಿ **ಎಲ್ಲರೂ ಈತನ ಕ್ರೋಧಕ್ಕೆ ಬಗ್ಗುವದಿಲ್ಲ. ಆದರೆ ಅಗೋಚರ ಪ್ರಪಂಚದ ವಿಷಯದಲ್ಲಿ ಅವರಿಗಿರುವ ಭಯ ಸಂದೇಹ ಅಂಧಶ್ರದ್ಧೆಗಳೂ ಹೋಗಿರುವ ದಿಲ್ಲ. ಆ ಪ್ರಪಂಚವೇ ಇವನಿಡುವ ಬೋನು, ಇವನು ಹಾಕುವ ಬಲೆ.**

ತಾನಂತೂ ಯಜಮಾನನಾಗಿಯೇ ಇದ್ದಾನಷ್ಟೆ? ಯಜಮಾನ ನಿಗಿದಿರು ಬೀಳುವದು, ಅವನ ಕಡೆಯಿಂದ ಹೆಚ್ಚಿನ ಸುಖವನ್ನು ಕೋರುವದು, ಅವನ ಇಚ್ಛೆಗಳನ್ನು ಶಿರಸಾವಹಿಸಿ ಪೂರೈಸದಿರು ವದು- ಇವೆಲ್ಲವೂ ಆ ದೇವರನ್ನು ಸಿಟ್ಟಿಗೆಬ್ಬಿಸುವ ನಡತೆಗಳು, ಧರ್ಮಕ್ಕೆ ವಿರುದ್ಧವಾದ ಗುಣಗಳು ಎಂದು ತೋರಿಸುವದಕ್ಕಾಗಿ ಈಗ ಗ್ರಂಥಕಥೆಗಳು ಹೊರಟವು ಒಂದರ ಮೇಲೊಂದು. ಇವುಗಳ ಸಾರಾಂ ಶವೆಲ್ಲ ಒಂದೇ- **ಯಜಮಾನನಿಗೆ ವಿಧೇಯರಾಗಿರಬೇಕು.** ವಿಧೇ ಯರಿಗೆ ಸ್ವರ್ಗ, ಅವಿಧೇಯರಿಗೆ ನರಕ. ಇಲ್ಲಿ ರೌಚಕ ಭಯಾನಕ *

---

* ಮಾನವನ ಧರ್ಮದ ಇತಿಹಾಸಕ್ಕೆ ಮೂರು ಭಾಗಗಳಿವೆ- ಭಯಾನಕ, ರೌಚಕ, ತಾತ್ತ್ವಿಕ ಎಂದು. ನಿಜವಾದ ಅಥವಾ ನರಕ ಮುಂತಾದ ಊಹೆಯಲ್ಲಿರುವ ದುಷ್ಪ ರಿಣಾಮಗಳಿಗೆ ಹೆದರಿ ಕರ್ಮವನ್ನು ಮಾಡುವದು ಭಯಾನಕಕ್ಕೆ ಸೇರಿದ ಧರ್ಮ. ಇಲ್ಲಿಯು ಸುಖ ಅಥವಾ ಸ್ವರ್ಗ ಲಾಭದ ಊಹೆಗಾಗಿ ಮಾಡುವ ಕರ್ಮಕ್ಕೆ ರುಚಿ ಪ್ರಧಾನವಾಗಿದೆ. ಇದು ರೌಚಕ. ಸಯುಕ್ತಿಕವಾಗಿ ಕಾರಣ ಪರಿಣಾಮಗಳನ್ನು ಅರಿತು ಮಾಡಬೇಕಾದ್ದನ್ನು ಅನಾಸಕ್ತಿಯಿಂದ ಮಾಡುತ್ತ ಅಲಿಪ್ತತೆಯಿಂದ ಸಾಗಿಸುವ ಜೀವ ನವು ಉಚ್ಚವಾದ ತಾತ್ತ್ವಿಕ ಧರ್ಮ ಜೀವನವು.

ಧರ್ಮ ಪ್ರಕರಣಗಳು ಚನ್ನಾಗಿ ರೂಪುಗೊಂಡವು. ಇವನ್ನು ಉಪದೇಶಿಸುವವರಾರು? ದೇವರು, ದೇವತೆಗಳು, ದೇವದೂತರು (ಆಕಾಶವಾಣಿ, ವಹಿ) ಋಷಿಗಳು, ಮುನಿಗಳು, ಪ್ರವಾದಿಗಳು, ಪೈಗಂಬರರು- ಇವರಲ್ಲಾರಾದರೂ ಒಬ್ಬರು! ಈ ಅದ್ಭುತ ವ್ಯಕ್ತಿಗಳು ತಮಗೆ ಬೇಕಾದವರನ್ನು ದಾಸರನ್ನಾಗಿ ಮಾಡಿಟ್ಟುಕೊಂಡಿದ್ದಾರೆ, ಹೆಂಡಂದಿರನ್ನಾಗಿ ಮಾಡಿಟ್ಟುಕೊಂಡಿದ್ದಾರೆ. ಸ್ವರ್ಗನರಕಗಳನ್ನು ಮರೆತುಬಿಟ್ಟು ಇವರ ಇಚ್ಛೆಯನ್ನು ಪೂರೈಸದೆ ಇರುವವರನ್ನು ಅನುಗ್ರಹ ಶಾಪ ಇತ್ಯಾದಿಗಳಿಂದಲೂ ಹಾದಿಗೆ ತಂದುಬಿಟ್ಟಿದ್ದಾರೆ! **ಇವರ ಕಥೆಗಳ ಮೂಲ:- ಇವರ ವಿಷಯಾಭಿಲಾಷೆ; ಅವುಗಳಿಗೆ ಬೆಂಬಲ- ನರಕ ಸ್ವರ್ಗ ಶಾಪಾನುಗ್ರಹಗಳ ಭಯರುಚಿಗಳು.** ಎಲ್ಲ ಮತಗ್ರಂಥಗಳಲ್ಲಿಯೂ ಈ ಗುಟ್ಟನ್ನೇ ಆಧಾರವಾಗಿಟ್ಟುಕೊಂಡ ಕಥೆಗಳನ್ನು ಸಾವಿರಗಟ್ಟಲೆಯಿಂದ ಕಾಣಬಹುದು. ಅಂಧಶ್ರದ್ಧೆಯ ಸಂಕಲೆಗೆ ಬಿಗಿಯಾದ ಹೊಸಗೊಲಸುಗಳಿನ್ನೆರಡು ಹೆಚ್ಚು ಬಿದ್ದವು. ಮೇಲೆ ಈ ಗ್ರಂಥಗಳು ಮುಕ್ತಿಮಾರ್ಗದ ದೀವಟಿಗೆಗಳಂತೆ!

ಶಾಪಾನುಗ್ರಹಗಳು

ವಯಸ್ಸಿನಿಂದಲಾಗಲಿ ಜಾತಿಯಿಂದಲಾಗಲಿ ಹಿರಿಯರಾದರಾಯಿತು. ಅವರು ಯಜಮಾನರೇ ಆದರು. ಈ ಅನುಕೂಲ ಉಚ್ಚನೀಚತೆಗಾಗಿ ಸ್ವೇಚ್ಛೆಯಂತೆ ವರ್ಣಾಶ್ರಮ ಧರ್ಮ§ ವೇರ್ಪಟ್ಟಿತು. ಅದರಲ್ಲಿ ಸ್ತ್ರೀಯರು ಪ್ರತಿವರ್ಣದ ಪುರುಷರಿಗಿಂತಲೂ ನೀಚರು. ಮೇಲಿನ ಮೂರು ವರ್ಣದವರು ದ್ವಿಜರಾದರು. ಅವರಿಗೆ ಶೂದ್ರರು ದಾಸರು, ಮತ್ತಿವರಿಗೆ ಪಂಚಮರು. ಮೊದಲನೆಯ ಮೂರು ವರ್ಣ

§ ಇದು ಅನುಕೂಲ ರೂಢಿಯ ವರ್ಣಾಶ್ರಮ! ಆದರೆ ತತ್ತ್ವತಃ ಇದುಹಾಗಿಲ್ಲ. ಗೀತೆಯ 'ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ' (೪ ೧೩), ಉಪನಿಷತ್ತಿನ 'ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾತ್ ದ್ವಿಜ ಉಚ್ಯತೆ' ಮುಂತಾದ ವಾಕ್ಯಗಳನ್ನು ನೋಡಿದರೆ ನಿಜವಾದ ವರ್ಣಾಶ್ರಮ ವಿಭಾಗವು ಗುಣಕರ್ಮ ಸಂಸ್ಕಾರಪ್ರಭಾತನೆಗಳಿಂದ ಸಹಜವೇ ಎಂದು ತೋರುತ್ತದೆ. ಉಚ್ಚನೀಚ ಭೇದಭಾವಗಳಿಗೆ ಅವಕಾಶವಿಲ್ಲ.

ದವರೂ ದ್ವಿಜರಾಗಿದ್ದರೂ ಅಲ್ಲಿಯೂ ಬ್ರಾಹ್ಮಣನಿಗೆ ಕ್ಷತ್ರಿಯನು ಬಗ್ಗಬೇಕು. ಈ ಧರ್ಮವನ್ನು ಸ್ವಾರ್ಥವು ಅಪಾರ್ಥಮಾಡಿ ಕಲ್ಪಿಸಿದಂತೆಯೇ ನಡೆಸುವದಕ್ಕಾಗಿ ಮುಂದೆ ಎಷ್ಟೋ ಭಯಾನಕ ರೋಚಕ ಕಥೆಗಳೂ ಸೂತ್ರಗಳೂ ಹುಟ್ಟಿದವು. ಕ್ರಮೇಣ ಮನುಷ್ಯರಿಗೆ ಮಾತ್ರವೇ ಅಲ್ಲ, ಗಿಡಮರಗಳಿಗೂ ಧಾತುಗಳಿಗೂ ಪಶುಪಕ್ಷಿಗಳಿಗೂ ವರ್ಣಾಶ್ರಮಧರ್ಮ ಉಂಟೆಂದಾಯಿತು. ವರ್ಣಕ್ಕನುಸಾರವಾಗಿ ಇಚ್ಛಾನುಸಾರ ಸತ್ತ್ವ, ರಜಸ್ ತಮೋಗುಣ * ಗಳನ್ನೂ ಕಲ್ಪಿಸಿದ್ದಾಯಿತು. ಸಾತ್ವಿಕಗಳಲ್ಲಿ ದೇವರಿದ್ದಾನೆಂದೂ ರಾಜಸಿಕಗಳಲ್ಲಿ ಬ್ರಹ್ಮರಾಕ್ಷಸ ದೇವತೆಗಳಿವೆಯೆಂದೂ ತಾಮಸಿಕಗಳಲ್ಲಿ ಭೂತಪಿಶಾಚಿಗಳಿವೆಯೆಂದೂ ನಿರ್ಧಾರವಾಯಿತು. ಕ್ರಮೇಣ ದೇವರಲ್ಲಿಯೂ ವ್ಯತ್ಯಾಸಬಂದು ಭಾಗಗಳಾದವು. ದೃಷ್ಟಾಂತಕ್ಕೆ, ಶಿವನು ರುದ್ರಾಕ್ಷ ಬಿಲ್ವಗಳನ್ನು ಆರಿಸಿಕೊಂಡನು. ವಿಷ್ಣುವು ಅಶ್ವತ್ಥ ತುಲಸಿಗಳನ್ನಾರಿಸಿದನು. ಹಾಗೆಯೇ ಧಾತುವರ್ಣಗಳನ್ನೂ ಹಂಚಿಕೊಳ್ಳೋಣವಾಯಿತು. ಬರಬರುತ್ತ ಒಂದೊಂದು ವರ್ಣಕ್ಕೊಂದು ಗುಣವನ್ನೂ ವೇದವನ್ನೂ ಕಲ್ಪಿಸಿದ್ದೂ ಆಯಿತು. ಬ್ರಾಹ್ಮಣನು ಋಗ್ವೇದದಿಂದಲೂ ಕ್ಷತ್ರಿಯನು ಯಜುರ್ವೇದದಿಂದಲೂ ವೈಶ್ಯನು ಸಾಮವೇದ§ ದಿಂದಲೂ ಹುಟ್ಟಿದ್ದಾನೆಂದಾಯಿತು. ಆಕಾಶದ ಸೂರ್ಯ ಚಂದ್ರ ನಕ್ಷತ್ರಾದಿಗಳು ಸಹ ಈ ವ್ಯವಸ್ಥೆಗೆ (ಅಥವಾ ಅವ್ಯವ್ಯವಸ್ಥೆಗೋ) ಆಧಾರವಾಗಿ ಬಂದವು. ವಂಶಮೂಲಕ್ಕಾಗಿ ಸೂರ್ಯಚಂದ್ರರು ನಿಂತು ಸೂರ್ಯವಂಶ ಚಂದ್ರವಂಶಗಳನ್ನು ಹುಟ್ಟಿಸಿದರು. ನಕ್ಷತ್ರಗಳಲ್ಲಿ ಸಹ ಆದರ್ಶಗಳೂ ಉಪದೇಶಕರೂ ಹೊರಟರು. ಅರುಂಧತಿಯನ್ನಲ್ಲವೆ ಪಾತಿವ್ರತ್ಯಕ್ಕೆ ಆದರ್ಶವಾಗಿ ಆಕಾಶದಲ್ಲಿ ಕಾಣತಕ್ಕದ್ದು? ವಿವಾಹವನ್ನು ನಡೆಸುವ ಭಟ್ಟರನೇಕರಿಗೇ ಅದರ ಗುರುತು ಹತ್ತುವದಿಲ್ಲ! ಆದರೂ ಪರವಾ ಇಲ್ಲ.

**ಕಲ್ಪನಾರಾಜ್ಯದ ವಿಕಾಸ**

* ಇವುಗಳ ವ್ಯಾಖ್ಯೆಯೂ ತತ್ತ್ವತಃ ನಿರ್ಮಲವೇ ಆಗಿದೆ. ಇಲ್ಲಿ ಚರ್ಚಿಸಲ್ಪಡುವದು ಅದಕ್ಕೆ ಸ್ವಾರ್ಥವು ಮಾಡಿದ ಅಪಾರ್ಥ ಮತ್ತು ಇದರಿಂದಾಗುತ್ತ ಬಂದ ಅನರ್ಥ.

§ ಮಹಾಭಾರತ— ಶಾಂತಿಪರ್ವ

ಆ ನಕ್ಷತ್ರವು 'ಆಕೆಗೆ ಕಾಣುವದಿಲ್ಲವಾದರೂ ನನಗೆ ಕಂಡುಬಂತು- ಎಂದು ಆಕೆಯು ಹೇಳಲಿ* ಎಂದು ಧರ್ಮಸೂತ್ರಗಳ ಉಪದೇಶ ವಿದೆ, ಈ ವ್ಯವಸ್ಥೆ ಅವ್ಯವಸ್ಥೆಯನ್ನು ತೋರಿಸುವದಕ್ಕಾಗಿ ಒಂದೇ ನಮೂನೆಯನ್ನು ತೆಕ್ಕೊಳ್ಳೋಣ. 'ವೇದಾನಾಂ ಸಾಮವೇದೋಸ್ಮಿ'§ ಯಲ್ಲವೆ? ಸಾಮವೇದವು ಶ್ರೇಷ್ಠವಾಯಿತು. ಆದರೆ ಸಾಮವೇದ ದಿಂದುದ್ಭವಿಸಿದವನು ಬ್ರಾಹ್ಮಣನಲ್ಲ ವೈಶ್ಯನು. ಈಗ ಯಾರು ಹೆಚ್ಚಿ ನವನೆನ್ನಬೇಕು? ಆದರೆ ಹಾಗೆ ನ್ಯಾಯದ ತೀರ್ಮಾನಕ್ಕೆ ಜಿಗಿಬಿಗಿ ಯಾದ ಆಚಾರಶೀಲರು ಒಪ್ಪುವರೋ?........... ಈ ವಿಷಯಗಳೆ ಲ್ಲವೂ ತಮ್ಮ ದೊಡ್ಡಸ್ತಿಕೆಯನ್ನು ಕೊನೆಗಾಣಿಸಲಿಕ್ಕೆ ಆಗಾಗ ಮಾಡಿದ ಉಪಾಯುಗಳು. ಅವು ಏಕಕಾಲದಲ್ಲಿಯೇ ಹುಟ್ಟಿರುವವಲ್ಲ; ಅದಕ್ಕಾಗಿ ಅವುಗಳಲ್ಲಿ ಪರಸ್ಪರ ತಾಲಮೇಲವೂ ಇಲ್ಲ. ಒಂದಕ್ಕಿನ್ನೊಂದು ವಿರುದ್ಧ! ಈ ಪರಸ್ಪರ ವಿರೋಧ ಅವ್ಯವಸ್ಥೆಗಳು ಹೊರಬೀಳದಂತೆ ಅಧಿಕಾರದ ಅನುಕೂಲ ರಕ್ಷೆಯೂ ಮಾಡಲ್ಪಟ್ಟಿತು. ಸ್ತ್ರೀಶೂದ್ರರಿಗೆ ವೇದಶಾಸ್ತ್ರಗಳನ್ನು ಓದುವ ಅಧಿಕಾರವಿಲ್ಲ! ಅವರಿಗೆ ಯಜಮಾನರ ಸೇವೆಯೇ ಮುಕ್ತಿಯ ಹಾದಿ ಎಂದು ದೇವಧರ್ಮಗಳ ತೀರ್ಮಾನ ವಾಯಿತು! ಕ್ರೈಸ್ತ, ಬೌದ್ಧ ಮತಗಳಲ್ಲಿ ಸ್ತ್ರೀಯರಿಗೆ ಧರ್ಮಶಾಸ್ತ್ರ ಗಳನ್ನರಿಯಲು ಅಧಿಕಾರವಿದೆಯಾದರೂ ಅವರು ಧರ್ಮಭೂಮಿಯ ಸಕಲ ಅಧಿಕಾರಗಳಲ್ಲಿ ಮಾತ್ರ ಗಂಡಸರಿಗೆ ಸಮಾನಸ್ಕಂದರಾಗ ಕೂಡದು.

ಹೀಗಾಗಿ ಮಂಗನಂತೆ ಹಾರಾಡುವ ಮಾನವನ ಮನ ಸ್ಸಿಗೆ ಹೊರಗೂ ಒಳಗೂ ಅನುಭವ ಮತ್ತು ಯುಕ್ತಿಗಳ ಮುಗದಾಣವೇ ಇಲ್ಲದಾಯಿತು. ಮೇಲೆ ಸ್ವಾರ್ಥದ ಹೆಂಡವೂ ಬಿದ್ದಿತು. ಕಲ್ಪನೆಯ ಮತ್ತಗಜಗಮನಕ್ಕೆ ಅಡ್ಡಿಯೇ ಇಲ್ಲ ದಂತಾಗಿ ಅದು ಸೊಕ್ಕೇರಿದಂತೆ ದಿಕ್ಕು ಹಿಡಿಯುತ್ತ ನಡೆಯುತ್ತ, ತನ್ನ ಸ್ವಚ್ಛಂದ ಸಂಚಾರಕ್ಕಾಗಿ ಎಲ್ಲವನ್ನು ತುಳಿಯುತ್ತ, ಅಳಿಸುತ್ತ

* ಗೃಹ್ಯಸೂತ್ರ (ಪಾರಸ್ಕರ) ೧. ೮–೨೦

§ ಗೀತೆ ೧೦. ೨೨

ತಾಂಡವವನ್ನಾಡುತ್ತ ಹೋಯಿತು. ವಿವೇಕದ ಅಲಿಪ್ತ ಧೋರಣೆಯ ಲ್ಲಿದ್ದಾಗ "ನವರ್ಣಾ ನವರ್ಣಾಶ್ರಮಾಚಾರಧರ್ಮಃ" ಎಂದು ಅಂದು ಬಿಟ್ಟ ಶಂಕರಾಚಾರ್ಯರು ಸಹ ಸಾಂತ್ವನದಿಂದ ಕೂತು ಬರೆದಾಗ "ಜಂತೂನಾಂ ನರಜನ್ಮ ದುರ್ಲಭಮತಃ ಪುಂಸ್ತ್ವಂ ತತೊ ವಿಪ್ರತಾ। ತಸ್ಮಾದ್ವೈದಿಕಧರ್ಮಮಾರ್ಗಪರತಾ ವಿದ್ವತ್ವಮಸ್ಮಾತ್ಪರಂ...." ಎಂದರು. ಈ ಶ್ಲೋಕದ ಅರ್ಥ- ೮೪ ಲಕ್ಷ ಜೀವ ರಾಶಿಗಳೊಳಗೆ ನರಜನ್ಮ ಬರುವದು ದುರ್ಲಭ. ಅದು ಬಂದಾಗ್ಯೂ ಗಂಡಸಾಗಿ ಹುಟ್ಟುವಿಕೆಯು ಇನ್ನೂ ಕಷ್ಟವಾದದ್ದು. ಅದರಲ್ಲಿಯೂ ವಿಪ್ರತ್ವವು ಬರೋಣ ಇನ್ನೂ ಅಸಾಧ್ಯ. ಹೇಗಿದೆ ಶಂಕರಾಚಾರ್ಯ ರಂಥ ವಿವೇಕ ಶಿಖಾಮಣಿಗೂ ಮುಚ್ಚಿಕೊಂಡ ರೂಢಿಯ ಮಾಯೆ! ಎಚ್ಚರಿಕೆಯಿಂದಲೇ ಆಗಲಿ ಅದಿಲ್ಲದೆ ಆಗಲಿ ಗಂಡಸುತನಕ್ಕೂ ವೇದಾ ಧಿಕಾರವುಳ್ಳ ವಿಪ್ರತ್ವಕ್ಕೂ ಎಲ್ಲಕ್ಕಿಂತ ಹೆಚ್ಚಿನ ಮಾನವನ್ನು ಎಲ್ಲ ಬೋಧಕರೂ ಸಾಧುಗಳೂ ಕೊಟ್ಟಿದ್ದಾರೆ. ಲಿಂಗಾಯತರು, ಜೈನರು ಬ್ರಾಹ್ಮಣೇತರ ಭಕ್ತಸಾಧುಗಳು ಬ್ರಾಹ್ಮಣ್ಯದ ದೊಡ್ಡಸ್ತಿಕೆಯನ್ನು ಕೆಳಕ್ಕೆಳೆದು ಹಾಕಿದರೂ ಹೆಂಗಸಿನ ಸಣ್ಣಸ್ಥಿಕೆಯನ್ನೆನೋ ತೋರಿ ಸಿಯೇ ಬಿಟ್ಟಿದ್ದಾರೆ. ವರ್ಣಾಶ್ರಮ ಭೇದಗಳ ಖಂಡನವನ್ನು ಮಾಡಿ ದರೂ ತಮ್ಮ ಮತದ ಭೇರಿಯನ್ನು ಬಾರಿಸಿಯೇ ಬಿಟ್ಟಿದ್ದಾರೆ. ಎಲ್ಲರೂ ಅಧಿಕಾರಕ್ಕಾಗಿ ಕಾದಾಡಿಯಾರು, ಆದರೆ ಅನಾಯಾಸವಾಗಿ ಸಿಕ್ಕಿದ ಅಧಿಕಾರವನ್ನು ಮಾತ್ರ ಸುಲಭವಾಗಿ ಬಿಟ್ಟಾರೋ ಯಾರಾ ದರೂ? ಯಾವ ಮತದಲ್ಲಿಯೂ ಸಂಪೂರ್ಣ ಸತ್ಯವೇನೋ ಇಲ್ಲ.

**ಸಂಘುಸುಖ ಪ್ರಗತಿಗಳ ಮೇಲಾದ ದುಷ್ಪರಿಣಾಮ.**

**ಇಂಥ ಮನಸ್ಥಿತಿಯು ಕಲ್ಪನೆಗಳಿಗೆ ಅಳ ತೆಯಿಲ್ಲ. ಮಿತಿಯಿಲ್ಲ. ಪರೀಕ್ಷಣ ಅನು ಭವಗಳ ಒತ್ತಾಯವಿಲ್ಲ, ಆಶೆಯಿಲ್ಲ. ಇದ ರಿಂದ ಬರೇ ಇಲ್ಲ ಸಲ್ಲದ ಊಹೆಗಳೇ ಹೆಚ್ಚುತ್ತ ಅನಿವಾರ್ಯ ಕರ್ಮ ಭೂಮಿಗೆ ಬೇಕಾದ ಭೌತಿಕ ವ್ಯವಹಾರ ಜ್ಞಾನವು ಹುಟ್ಟದೆ ಹೋಯಿತು.** ಇದರಿಂದ ದೇಶವು ದುರ್ಬಲವಾಯಿತು,

ಭೌತಿಕ ಜ್ಞಾನವು ಹೆಚ್ಚಿದ್ದ ಕಡೆಯವರು ದಂಡೆತ್ತಿ ಬಂದರು, ನಮ್ಮನ್ನು ದಾಸರನ್ನಾಗಿ ಮಾಡಿದರು. ಹಿಂದೂ ದೇಶದ ಚರಿತ್ರೆಯೆಂದರೆ ಅಕಟಾ- ದಾಸ್ಯದ ಇತಿಹಾಸ ವೈವಿಧ್ಯವೇ! ದೇವಧರ್ಮ ಪ್ರಿಯರಾದ ಈ ಜನರು ಅದಕ್ಕೂ ಸಮಾಧಾನವನ್ನೆತ್ತಿದರು. ರಾಮ ನಾಳಿದರೇನು ರಾವಣನಾಳಿದರೇನು, ಇಹವು ಅಶಾಶ್ವತವೇ ಎಂದು ಹೇಳಿಯೇ ಬಿಟ್ಟರು!

ಇಷ್ಟೇ ಅಲ್ಲ ಈ ಕಲ್ಪನಾ ಸಾಮ್ರಾಜ್ಯದ ಕಾಟ. ಇದು ಸಕಲ ಪರೀಕ್ಷಣಾನುಭವಸಿದ್ಧ ಜ್ಞಾನಕ್ಕೂ ವೈರಿಯಾಗಿ ನಿಲ್ಲುತ್ತದೆ. ಅದರ ಸಂಶೋಧಕರನ್ನು ವಿಧವಿಧವಾಗಿ ಹಿಂಸಿಸುತ್ತದೆ. ಅಸುರ, ಚಾರುವಾಕ, ನಾಸ್ತಿಕ ಮುಂತಾದ ನಾಮಗಳಿಂದ ನಿಂದಿಸಿ ನೊಂದಿಸಿ ಬಿಡುತ್ತದೆ. ಪ್ರತಿಯೊಂದು ಮತದ ಇತಿಹಾಸದಲ್ಲಿಯೂ ಈ ಪ್ರಕಾರವಾದ ಹಿಂಸೆಯ ಪ್ರಕರಣಗಳು ಎಷ್ಟೋ ಇವೆ! ನೋಡಿ ಪರೀಕ್ಷಿಸಿ ಜನರ ವಿಮರ್ಶಾಪರ ಬುದ್ಧಿಯ ಮುಂದಿಟ್ಟ ಜ್ಞಾನವು ಈ ಧರ್ಮಾತ್ಮರಿಗೆ ಬರಿಯ ಅಜ್ಞಾನ, ಅಧರ್ಮ, ದೇವರನ್ನು ಮರೆಸುವ ರೀತಿ, ಸೈತಾನನ ಕಣ್ಣುಕಟ್ಟುಗಳಂತೆ! ತಾವೋ ತಮ್ಮ ಗ್ರಂಥಗಳಲ್ಲಿ ಬರೆಯದ ಜ್ಞಾನವಿಲ್ಲ ವಿವರಿಸದ ವಿಷಯವಿಲ್ಲ! ಇವರ ಭೂಗೋಲ ಶಾಸ್ತ್ರವೇ ಬೇರೆ. ಅದರಲ್ಲಿ ಭೂಮಿಗೆ ಒಂದು ದೊಡ್ಡ ಹಾವಿನ ಹೆಡೆಯೇ ಆಧಾರ! ಅದಕ್ಕೆ ಸಮುದ್ರಗಳು ಏಳು! ಹಾಲು, ಸುರೆ, ಮೊಸರು, ತುಪ್ಪ, ಜೇನು ಮುಂತಾದ ರುಚಿಕರ ವಸ್ತುಗಳ ಸಮುದ್ರಗಳೇ ಹೆಚ್ಚು ಅದರಲ್ಲಿ! ಸೂರ್ಯನೇ ಭೂಮಿಗೆ ಪ್ರದಕ್ಷಿಣೆಗಳನ್ನು ಹಾಕುತ್ತಾನೆ ಎಂದು ಅವರ ಸಿದ್ಧಾಂತ! ಧರ್ಮಾತ್ಮರ ಇತಿಹಾಸವೂ ಬೇರೆಯೇ. ಅದರಲ್ಲಿ ಭೂತಮಾತ್ರವೇ ಅಲ್ಲ ಭವಿಷ್ಯವೂ ಬರೆಯಲ್ಪಟ್ಟಿದೆ. ಅದರಲ್ಲಿ ಒಬ್ಬೊಬ್ಬರು ಯುಗ ಯುಗಾಂತರಗಳ ತನಕ ಜೀವಿಸಿ ತಪಸ್ಸು ಮಾಡಿದ್ದಾರೆ! ಹಲ ಕೆಲವರು ಸಾವಿರಾರು ವರ್ಷ ಬದುಕಿ ರಾಜ್ಯವನ್ನಾಳಿದ್ದಾರೆ! ದೇವಲೋಕಕ್ಕೇರಿ ಯುದ್ಧ ಮಾಡಿದ್ದಾರೆ! ದೇವತೆಗಳನ್ನು ಇಹಕ್ಕಿಳಿಸಿದ್ದಾರೆ!

ಸಜ್ಞಾನ ಶಿಕ್ಷಣಕ್ಕೆ ಕಲ್ಪನಾ ಸಾಮ್ರಾಜ್ಯದ ಕಾಟ.

ಭಕ್ತಿವಿಜಯವೂ ಒಂದು ಇತಿಹಾಸವೇ. ಕಬೀರನನ್ನು ರಾಮದಾಸನೊಡನೆ ಮೀರಾಬಾಯಿಯನ್ನು ಅಕ್ಬರನೊಡನೆ ಹಾಕಿಬಿಟ್ಟಿದ್ದಾರೆ! ಒಬ್ಬೊಬ್ಬರು ಹುಟ್ಟಿದ್ದ ಶತಮಾನಗಳೇ ಬೇರೆ! ವರ್ಷಗಳ ಅವ್ಯವಸ್ಥೆ! ಸಾರಾಂಶ ಕಲ್ಪನಾ ಪ್ರಪಂಚದ ಪ್ರತಿಯೊಂದು ಸಿದ್ಧಾಂತವೂ ಅನುಭವ ರಾಜ್ಯದ ಸಿದ್ಧಾಂತಕ್ಕೆ ವಿರುದ್ಧವಾಗಿಯೇ ಇದೆ. ಮೇಲೆ ಅದು ಜ್ಞಾನ, ದೇವರು ಇಳಿಸಿ ಕೊಟ್ಟದ್ದು; ಇದು ಅಜ್ಞಾನ ಮನುಷ್ಯನು ಅಗೆದು ತೆಗೆದದ್ದು! **ಇಂಥ ಪ್ರಗತಿವಿನಾಶಕ ಮಂಕುತನದಿಂದ ಜನತೆಯು ಇನ್ನೂ ಬಹಳ ಹಿಂದಕ್ಕೆ ಉಳಿದಿದೆ.** ಜ್ಞಾನವು ಬೆಳೆಯಬೇಕಾದರೆ ಅದರಲ್ಲಿ ಯಥಾರ್ಥತೆ ಸೂಕ್ಷ್ಮತೆಗಳಿರಬೇಕು. ಅಂದಾಜು ಜ್ಞಾನದ ಮೂಲವಲ್ಲ; ಅತಿಶಯೋಕ್ತಿಯ ಬೇರು. ಈ ಅತಿಶಯೋಕ್ತಿಯನ್ನು ಎಲ್ಲ ಧರ್ಮಗ್ರಂಥಗಳಲ್ಲಿಯೂ ನೋಡಬಹುದು. ನಮ್ಮ ಮಾತಿನಲ್ಲಿಯೇ ನೋಡಬಹುದು. ಸಾಹಿತ್ಯದಲ್ಲಿ ನೋಡಬಹುದು. ಕಲಾಪ್ರಪಂಚದಲ್ಲಿ ನೋಡಬಹುದು. ಸಂಖ್ಯೆಗಳನ್ನು ಬೆಳೆಸುವದರಲ್ಲಿಯೂ ಇಳಿಸುವದರಲ್ಲಿಯೂ ನಾವು ಬಹು ಉದಾರರು! ಕೋಟಿ ಲಕ್ಷಗಳೆಂದರೆ ಬಹು ಚಿಲ್ಲರೆ ಸಂಖ್ಯೆಗಳೇ ನಮ್ಮ ಧರ್ಮಾತ್ಮರಿಗೆ! ಆಯುಷ್ಯ ಯುಗ ಯುಗಾಂತರಗಳದು ಎಂದು ಹಿಂದೆಯೇ ಹೇಳಿದೆಯಷ್ಟೆ. ಹಾಗೆಯೇ ಕೆಲವು ದೊಡ್ಡ ದೇವಸ್ಥಾನಗಳು ಒಂದು ರಾತ್ರಿಯಲ್ಲಿ ಕಟ್ಟಲ್ಪಟ್ಟು ಕೋಳಿ ಕೂಗುವಷ್ಟರೊಳಗಾಗಿ ಮುಗಿಸಲ್ಪಟ್ಟವೆ! ಒಬ್ಬೊಬ್ಬ ಭಕ್ತರು ಹಾಡಿದ ಪದಗಳು ಎಷ್ಟೋ ಲಕ್ಷಗಳಂತೆ! ಕಬೀರನು ಅಯೋನಿಜನಾಗಿ (ಶುಕನ ಅವತಾರನಂತೆ) ಹುಟ್ಟಿ ಎಷ್ಟೋ ಲಕ್ಷ ಹಾಡುಗಳನ್ನು ಬರೆದನಂತೆ. ತುಕಾರಾಮನೂ ಹಾಗೆಯೇ. ಆದರೆ ಈ ಭಕ್ತರಿಗೆ ವೈರಿಗಳಿರೋಣದರಿಂದ ಇವರು ಅವರ ಕೆಲವು ಹಾಡು ಅಭಂಗಗಳನ್ನು ಎಲ್ಲಿಯೋ ತಪ್ಪಿ ಬಿಟ್ಟು ಉಳಿಕೆಯವನ್ನು ಧ್ವಂಸ ಮಾಡಿ ಬಿಟ್ಟರಂತೆ! ಅತಿಶಯೋಕ್ತಿಯ ನಮೂನೆಗಾಗಿ ಈ ಒಂದು ದೇವರನಾಮದ ತುಂಡು ಸಾಕು:–

**ಅತಿಶಯೋಕ್ತಿ ಅಸತ್ಯವಲ್ಲವೋ?**

ಈರೆರಡು ಲಕ್ಷಗಳ ಮೇಲೆ ಇಪ್ಪತ್ತೈದು । ಸಾವಿರದ ಗ್ರಂಥ ರಚಿಸಿ । ಈರೆರಡು ದಿಕ್ಕಿನಲಿ । ಚರಿಸಿ ತೀರ್ಥಕ್ಷೇತ್ರ । ಸಾರ ಮಹಿಮೆಗಳ ಸ್ತುತಿಸಿ........ ||

ಗಂಗೆ ಗೌತಮಿತುಂಗ । ಭದ್ರಾದ್ರಿ ದೇವತರಂ । ಗಿಣಿಯರೆಲ್ಲ ಬಂದೂ । ಅಂಗಳವ ಸಾರಿಸುತ । ರಂಗವಾಲೆಯನಿಕ್ಕಿ । ಶೃಂಗಾರ ಗೈವರೆಂದೂ ॥ ಕಂಗಳಿಗೆ ತೋರಿದನು । ಡಿಂಗರಿಗ ಗುರುರಾಯ । ತಂಗಿಯನು ಕರೆದು ತಂದೂ । ಮಂಗಳಾಂಗನ ಭಕ್ತ ಪುಂಗವನು ನೀನೆಂದು ಇಂಗಿತವ ಸಾರ್ದು ಬಂದೂ । ನಿಂದೂ ॥

ಅತಿಶಯೋಕ್ತಿಯ ಭರವು ಇಹಪರಗಳಲ್ಲಿರುವ ಸಜೀವ ನಿರ್ಜೀವ ವಸ್ತುಗಳನ್ನೂ ಎಬ್ಬಿಸಿ ಮನುಷ್ಯನಿಗಾಗಿ ದುಡಿಸುತ್ತದೆ! ಅತಿಶಯೋಕ್ತಿಯೂ ಅಸತ್ಯತೆಯೇ ಎಂಬದನ್ನು ಹೇಳಿದರೂ ಕೇಳಲಿಕ್ಕಿಲ್ಲ ಧರ್ಮಾತ್ಮರು! ಮತ್ತು **ತಲೆಯು ಹೀಗಿರುವ ವರೆಗೆ ಸತ್ಯ ಜ್ಞಾನ ಸ್ವಾತಂತ್ರ್ಯ ಲೋಕಪ್ರೇಮ ಹಾಗೂ ನಿಜಧರ್ಮವು ಬೆಳೆಯಲಿಕ್ಕೇ ಇಲ್ಲ.**

ಈ ರೀತಿ ಒಂದು ಹೊಸ ಕಲ್ಪನಾಪ್ರಪಂಚವೇ ಉಂಟಾಗಿ ಒಂದು ಕಡೆ ಸ್ತ್ರೀಶೂದ್ರರನ್ನು ಇನ್ನೊಂದು ಕಡೆ ವಿಚಾರಪರೀಕ್ಷಣ ಪ್ರಿಯ ಹೈತುಕರನ್ನೂ ಇಬ್ಬರ ಸುಖಸ್ವಾತಂತ್ರ್ಯ, ಜ್ಞಾನವಿಕಾಸ, ಸಂಘೋಪಕಾರಕ ಶಕ್ತಿಗಳನ್ನೂ ಬಡೆದುಹಾಕಿತು. ಹೈತುಕರ ಅಭಿವೃದ್ಧಿ ಎಂದರೆ ಜ್ಞಾನವಿಕಾಸ ಒಂದೇ ಅಲ್ಲ ಜ್ಞಾನಪ್ರಚಾರವೂ. ಹಾಗೂ ಜನಗಣದ ಏಳಿಗೆಯೂ. ಹೇತುವಾದವೆಂದರೆ ಕಾರ್ಯಕ್ಕೆ ತಕ್ಕ ಬೆಲೆ. ಅದರ ಹಿತಾಹಿತಕಾರಕ ಪರೀಕ್ಷೆಗೆ ಸಂಘದ ಸುಖದುಃಖಗಳೇ ಅಳತೆಗಳು. ಇಲ್ಲಿ ಜನ್ಮಕ್ಕೆ ಮಾನವಿಲ್ಲ, ಸತ್ಕರ್ಮಕ್ಕೇ. ಅಕಸ್ಮಾತ್ತಾಗಿ ಬಂದ ಶಕ್ತಿಗೆ ಮಾನವಿಲ್ಲ, ಪ್ರೋತ್ಸಾಹವಿಲ್ಲ. ದುಡಿದೇ ದೊಡ್ಡವನಾಗಬೇಕು. ವ್ಯುತ್ಪತ್ತಿಪ್ರೇಮದ ವಾತಾವರಣದಲ್ಲಿ ದೇವ

ಧರ್ಮಗಳು ಉಚಿತವಾಗಿತ್ತ ದೊಡ್ಡಸ್ತಿಕೆಯು ಇಳಿಯುತ್ತದೆ. ಕಷ್ಟ ಕರ್ಮಗಳಿಂದಲೇ ದೊಡ್ಡಸ್ಥಿಕೆಗೆ ಯಾರಾದರೂ ಏರಬೇಕು. **ಹಾಗೇರುವದಕ್ಕೆ ತಕ್ಕ ವಾತಾವರಣವನ್ನುಂಟುಮಾಡುವದೇ ಹೈತುಕರ ಸದ್ಧರ್ಮಸಾಧನ.** ಇಲ್ಲಿ ಪಟ್ಟಾಂಗಪಟ್ಟಣದ ಪಟ್ಟಾಭಿಷಕ್ತರಿಗೆ ಅಂದರೆ ಪಾದ್ರಿಪೂಜಾರಿಗಳಿಗೆ ಮುಲ್ಲಾಮಾಲಿಕರಿಗೆ ನಡುಗು ಹುಟ್ಟುತ್ತದೆ. ಯಾಕೆಂದರೆ ಇಲ್ಲಿ 'ಬ್ರಾಹ್ಮಣೋ ಮಮದೇವತಾ' 'ರಾಜಾಪ್ರತ್ಯಕ್ಷ ದೇವತಾ' ಇತ್ಯಾದಿಗಳನ್ನು ಕೇಳುವವರಿಗೇ ದಿಕ್ಕಿಲ್ಲ. ಧರ್ಮಾಧಿಕಾರಪ್ರಿಯರೂ ರಾಜ್ಯಾಧಿಕಾರಪ್ರಿಯರೂ ಒಂದಾಗಿ ಹೈತುಕರನ್ನೂ ಅವರನ್ನು ಸಹಜವಾಗಿ ಕೈವಾರಿಗಳೆಂದು, ಬಂಧುಗಳೆಂದು ಭಾವಿಸುವ ಸೇವಿಸುವ ಸ್ತ್ರೀಶೂದ್ರರನ್ನೂ ತಮ್ಮ ಪಶುಬಲದಿಂದ ಬಡೆದು ಬಗ್ಗಿಸುತ್ತಾರೆ. ಹೀಗಿದೆ ಧರ್ಮರಾಜ್ಯದ ಇತಿಹಾಸ ಇಂದಿನವರೆಗೆ!

ಹೈತುಕರು ಮತ್ತು ಸ್ತ್ರೀಶೂದ್ರರು

ಆದರೂ ನೈಸರ್ಗಿಕ ಶಕ್ತಿ ಮತ್ತು ಒತ್ತಾಯಗಳನ್ನು ಕೆಲ ಕಾಲ ಬಗ್ಗಿಸಿದರೂ ಎಲ್ಲ ಕಾಲಕ್ಕೂ ಬಗ್ಗಿಸಲಾಗುವದೇ ? ಅದು ತನ್ನನ್ನು ಭೋಗಿಸಲಿಕ್ಕೆ ಪೂರೈಸಲಿಕ್ಕೆ ಅನೇಕಾನೇಕ ಮಾರ್ಗಗಳನ್ನು ತೆರೆಯುತ್ತದೆ. ಬಲವಿದ್ದಾಗ ಅದಕ್ಕೆ ತಕ್ಕ ಅವಕಾಶವಿದ್ದಾಗ ಉತ್ಕ್ರಾಂತಿ ಪರಿವೃತ್ತಿಗಳುಂಟಾಗುತ್ತವೆ. ಘೋರ ಯುದ್ಧಗಳುಂಟಾಗುತ್ತವೆ. ಇದಕ್ಕೆ ಇಂದಿನವರೆಗಿನ ಇತಿಹಾಸವೇ ಸಾಕ್ಷಿ. ಬೊಲ್ಷೆವಿಜಮ್, ಕೊಮ್ಯುನಿಜಮ್, ಸೋಸ್ಯಲಿಜಮ್ ಮುಂತಾದವುಗಳು ಇಂಥ ಅನುಕೂಲ ವಾತಾವರಣದ ಪ್ರಭಾವಗಳೇ. **ಹೈತುಕರ ಮತ್ತು ಜನಸಮುದಾಯದ ಐಕ್ಯ, ಕರ್ಮಪ್ರಗತಿ, ವಿಜಯಗಳ** ಲಕ್ಷಣಗಳೇ ಇವು. ಇವರ ಒಗ್ಗಟ್ಟು ಹಿಂದೆಷ್ಟೋ ಸಲ ಆಗಿತ್ತು ಆದರೆ ವಿಜಯಕ್ಕವಕ್ಕಾಶವಿರಲಿಲ್ಲ. ಬೌದ್ಧಯುಗದಲ್ಲಿ ಈ ತತ್ತ್ವಗಳು ಧಾರಾಳವಾಗಿ ಹಬ್ಬಿದವು, ಮೈಗೂಡಿಹೋದವು, ಪ್ರಗತಿಯನ್ನು ಹೊಂದಿದವು. ಆದರೂ ಸಂಪೂರ್ಣವಾಗಿ ಜಯವನ್ನು ಹೊಂದಲಿಲ್ಲ. ಅದಕ್ಕೆ ಮುಖ್ಯ ಕಾರಣಗಳು (೧) ಬಡವರ ದಾರಿದ್ರ್ಯ ದುರ್ಗತಿಗಳು ಅಷ್ಟಾಗಿ ಹೆಚ್ಚಿರಲಿಲ್ಲ. (೨) ಅವರ ಕಾರ್ಯರಂಗವು ಕೃಷಿಕರ್ಮಕ್ಕೆ

ಸೇರಿತ್ತಾಗಿರೋಣದರಿಂದ ಅವರ ಸಮುದಾಯಕ್ಕೆ ಒಂದುಕಡೆ ಸೇರುವ ಅವಸರಾವಶ್ಯಕತೆಗಳಿರಲಿಲ್ಲ. (೩) ಭೌತಿಕ ಜ್ಞಾನಪ್ರಚಾರವು ಸಾಕಷ್ಟಿಲ್ಲದೆ ಇನ್ನೂ ಪೌರಾಣಿಕ ಜ್ಞಾನದ ಹಿಡಿತದಲ್ಲಿಯೇ ಬಡಬಗ್ಗರಿದ್ದರು. ಆದರೆ ಈ ಇಪ್ಪತ್ತನೇ ಶತಮಾನದ ಮೊದಲಿನಲ್ಲಿ ದೇವ

ಉತ್ಕ್ರಾಂತಿ ಧರ್ಮಾಂಗವೂ ರಾಜರಾಜ್ಯಾಂಗವೂ (ಚರ್ಚ್ ಮತ್ತು ಸ್ಟೇಟ್) ಒಬ್ಬರಿನ್ನೊಬ್ಬರಿಗೆ ಬೆಂಬಲವಾಗಿದ್ದುಕೊಂಡು ಮಾಡಿದ ಬಡ ಕೂಲಿಕಾರರ ಲೂಟಿಯೂ, ಅದರಿಂದ ಬಂದ ಸಂಕಟಗಳೂ ಸಹಿಸಲಸಾಧ್ಯವಾಗಿ ಹೋದವು. ಅದರಿಂದ ಕೂಲಿಕಾರರ ದಂಗೆಗಳೆಷ್ಟೋ ಆದವು. ಅವುಗಳಿಗೆ ಏಟೂ ಬಿತ್ತು. ಆದರೂ ಭೌತಿಕ ಜ್ಞಾನಾಭಿವೃದ್ಧಿಯು ಕೃಷಿಯುಗವನ್ನು ತೆಗೆದು ಉದ್ಯಮ‡ಯುಗವನ್ನುದಯಿಸಿ ಬೆಳೆಸಿತ್ತು. ಬೇರೆ ಬೇರೆ ಹೊಲಗದ್ದೆಗಳಲ್ಲಿ ದುಡಿಯುವ ಕೂಲಿಕಾರರು (ಶೂದ್ರರು) ಒಂದೇ ಕಡೆ ಕಾರಖಾನೆಗಳಲ್ಲಿ ಗುಂಪುಗುಂಪಾಗಿ ಹಾಕಲ್ಪಟ್ಟರು. ಈ ವಾತಾವರಣದಲ್ಲಿ ಹುರಿಗೊಂಡು ಹೆಂಗಸರೂ* ಸ್ವಾತಂತ್ರ್ಯಕ್ಕಾಗಿ ದಂಗೆ ಎಬ್ಬಿಸಿದರು. **ಇವರ ಸಂಘಬುದ್ಧಿಯು ಹೆಚ್ಚಿತು. ಸಂಘಬಲವೂ ಹೆಚ್ಚಿತು.** ಭೌತಿಕಶಾಸ್ತ್ರದ ದೃಶ್ಯಜ್ಞಾನಪ್ರಾಬಲ್ಯವೂ ತಮ್ಮ ತಮ್ಮ ಅನುಭವದ ಸಂಕಟಗಳೂ ಕೂಡಿ ದೇವಧರ್ಮ ಪಾದ್ರಿಗಳಲ್ಲಿಯ ಅಂಧಶ್ರದ್ಧೆಯನ್ನೂ ಪುರಾತನ ಮಂಕುಮಜಿಗಿಜಿಯನ್ನೂ ಝಾಡಿಸಿ ಬಿಸುಟು ಹಾಕಿದವು. ಇದರಿಂದ ಇವರ ಹೊಸ ತತ್ತ್ವಗಳು ಅನೇಕ ಯುರೋಪ್ಯ ದೇಶಗಳಲ್ಲಿ ಪ್ರಗತಿಯನ್ನು ಹೊಂದುತ್ತ ರಶಿಯಾ ಟರ್ಕಿಗಳಲ್ಲಿಯೂ ಸಂಪೂರ್ಣ ಜಯವನ್ನು ಹೊಂದಿದವು. ಇಲ್ಲಿ ದೇವಧರ್ಮಗಳಿಗೆ ಗೋರಿ ಮಣ್ಣಾಯಿತು. **ಆದರೆ ಜನರ ಸುಖಸೌಭಾಗ್ಯ ಸ್ವಾತಂತ್ರ್ಯಗಳೂ ನಿಸ್ಸಂದೇಹವಾಗಿ ಹೆಚ್ಚಿದವು. ಹೇತುವಾದಕ್ಕೆ ನೀರು ಗೊಬ್ಬರ ಬಿದ್ದು ಸತ್ಯಜ್ಞಾನ ಪ್ರಚಾರವೂ ಆಯಿತು. 'ನಾಸ್ತಿ**

‡ ೧೬ನೇ ಶತಮಾನದಲ್ಲಿ ಮೊದಲಾಯಿತು Industrial Era.

* The Suffragette Movement ೧೯ನೇ ಶತಮಾನದಲ್ಲಿ ಮೊದಲಾಯಿತು

**ಕ'ರು ಮಾಡಿದ ಈ ಕಾರ್ಯವು ಧರ್ಮವಲ್ಲವೋ?** ಪ್ರಜಾಹಿತ ಮತ್ತು ಜ್ಞಾನಾಭಿವೃದ್ಧಿ– ಇವನ್ನು ಬಿಟ್ಟು ಬೇರೆ ಧರ್ಮ ವ್ಯಾಖ್ಯೆಯಿದೆಯೋ ಎಲ್ಲಿಯಾದರೂ (ಸ್ವಾರ್ಥಿ ವಿಷಯಿಗಳ ತಲೆಯೊಂದರಲ್ಲದೆ)? ನಮ್ಮಲ್ಲಿಯೇ ಈಗ ನಡೆದ ನಡೆಯುತ್ತಿರುವ ಕ್ರಾಂತಿಯ ಇತಿಹಾಸವನ್ನು ಬೇರೆಯಾಗಿ ಬರೆಯುವದು ಗುಡ್ಡಕ್ಕೆ ಮಣ್ಣು ಹೊತ್ತಂತೆ. ಆದರೆ ಆದರ ಹೃದಯವೂ ಇಂಥ ನಿಜವಾದ ಧರ್ಮವೇ ಎಂದು ಹೇಳಲೇಬೇಕಾಗುತ್ತದೆ. ಇಂಥ ಅಹಿಂಸಾತ್ಮಕವಾದ ಸಯುಕ್ತಿಕವಾದ, ಯೋಗ್ಯವಾದ, ಅಗತ್ಯವಾದ ಸಕಲ ಜನೋಪಕಾರಕವಾದ ಧರ್ಮದ ಗತಿಪ್ರಗತಿಗಳನ್ನು ಪ್ರತಿಬಂಧಿಸುವ ದೇವಮತ ವ್ಯಕ್ತಿ ಶಕ್ತಿಗಳನ್ನೆಲ್ಲ ಇದಿರಿಸಿ ಪ್ರತಿಭಟಿಸಿ ಹಾದಿಗೆ ತರುವದೂ ಒಂದು ಧರ್ಮವೇ ಅಲ್ಲವೆ? ಅದಾವ ದೇಶದಲ್ಲಿಯೇ ಆಗಲಿ, ಇಂಥ ವೀರ ಧರ್ಮವನ್ನು ಹೂಡುವವರೇ ಪೂಜಾರ್ಹರು. ಆದನ್ನು ನಡೆಸುವವರೇ ಮಾನಾರ್ಹ ಧರ್ಮಾಭಿಮಾನಿಗಳು.

**ಕುಟಿಲತೆ**

ಜನಾಂಗದ ಒಂದು ಚಿಕ್ಕ ಭಾಗದ ಸುಖಕ್ಕಾಗಿ ಇನ್ನೊಂದು ದೊಡ್ಡ ಭಾಗವು ಅಧೀನವಾಗಿರಬೇಕೆಂದಲ್ಲವೆ ಈ ನಾಗರಿಕತೆಯ ನೀತಿ ಪ್ರಯತ್ನಗಳು? ಸ್ವಲ್ಪವೇ ಆಗಲೊಲ್ಲದೇಕೆ- ವಿಚಾರೋದಯವನ್ನು ಕಂಡ ಮಾನವ ಜೀವಿಗೆ ಇದು ಸಾಧ್ಯವೋ? ಎಂದಿಗೂ ಅಲ್ಲ. ಆದರೆ ವಿಷಯಿಯ ಆಕಾಂಕ್ಷೆಯನ್ನು ಪೂರೈಸುವ ಬಗೆ ಯಾವದು? (೧) ಬಲಾತ್ಕಾರ (೨) ದೇವಧರ್ಮ ಸ್ವರ್ಗ ನರಕಶಾಪಾನುಗ್ರಹಗಳ ಭಯರುಚಿಗಳು (೩) ನಿಂದಾಸ್ತುತಿ (೪) ಲಾಲನ ಪರಿಪೋಷಣ. ಮೊದಲನೆಯ ಎರಡು ಹಿಂದೆ ವಿವರಿಸಲ್ಪಟ್ಟವೆ. ಈಗ ಮೂರನೆಯ ಉಪಾಯವೂ ಅವರು ಬರೆದ ಶಾಸ್ತ್ರ ಸೂತ್ರ ಸಾಹಿತ್ಯಗಳಲ್ಲಿ ಧಾರಾಳವಾಗಿದೆ. ಯಜಮಾನನನ್ನು ಇದಿರಿಸಿದ, ತಿರಸ್ಕರಿಸಿದ ಶೂದ್ರನಿಗೆ ಆತನ ಸಂಘದಲ್ಲಿಯೇ ಮಾನವಿಲ್ಲ. ಈಗಲಾದರೂ ಪಂಚಮರಲ್ಲಿ ಸುಧಾರಣೆಯನ್ನುಂಟುಮಾಡಲಿಕ್ಕೆ ಹೋಗಿರುವರ ಅನುಭವವನ್ನು ಕೇಳಿ ನೋಡಬಹುದು. ಇತರರು ಅವರನ್ನು ಮುಟ್ಟಲಿಕ್ಕೆ ಹೋದರೂ ಅವರು ಮುಟ್ಟಿಸಿಕೊಳ್ಳುವದಿಲ್ಲ!

ಯಾಕೆಂದರೆ ಮೇಲಿನವರನ್ನು ಮುಟ್ಟುವದು ಪಾಪವೆಂಬ ಭೀತಿಯನ್ನು ಧರ್ಮವು ಅವರ ತಲೆಯಲ್ಲಿ ಚನ್ನಾಗಿ ತುಂಬಿಸಿದೆ. ಅಷ್ಟೇ ಅಲ್ಲ- ಹಾಗೆ ಪಾಪವನ್ನು ಮಾಡುವ ಪಂಚಮನನ್ನು ಆತನ ಸಂಘವೇ ಸಹಿಸುವದಿಲ್ಲ. ಬಹಿಷ್ಕರಿಸಿ ಬಿಡುತ್ತದೆ. ಇದವನಿಗೆ ಅವಮಾನ ಒಂದು, ಅನನುಕೂಲ- ಇನ್ನೊಂದು. ಅದೇ- ಆತನು ಯಜಮಾನರ ಪರಿಪೋಷಣೆಯಲ್ಲಿದ್ದರೆ ತೊಂದರೆಯಿಲ್ಲ. ಇಲ್ಲಿ ಅವಮಾನ ಬಹಿಷ್ಕಾರಗಳಿಲ್ಲ. ಮುಂದೆ ನರಕವೂ ಇಲ್ಲ! ಆತನಿಗೆ ಹೊಟ್ಟೆ ಬಟ್ಟೆಗಳಿಗೆ ಅಲ್ಪ ಸ್ವಲ್ಪವಿದ್ದರೂ ಸಾಕು, ಮನೆಗೊಂದು ಬಿದುರುಸೊಪ್ಪಿನ ಗುಡಿಸಲೇ ಸಾಕು. ಹೊಟ್ಟೆಗೆ ಅತಿ ಅಗ್ಗವಾದ ಕಾಳು. ಬಟ್ಟೆಗೆ ಯಜಮಾನರು ಕಿತ್ತೊಗೆದ ಚಿಂದಿಗಳು ಸಾಕು. ಇದಕ್ಕಿಂತ ಹೆಚ್ಚಿನ ಆಶೆಯೇ ಇಲ್ಲವನಿಗೆ. **ಈ ಅಲ್ಪಸಂತುಷ್ಟಿಯೇ ಯಜಮಾನರ ಬಲ. ಬಡಬಗ್ಗರಿಗೆ ಬಲೆ.** ಅವರ ಆಕಾಂಕ್ಷೆಗಳು ಬೆಳೆದವೋ ಈ ಯಜಮಾನಿಕೆಗೆ ಮತ್ತವಕಾಶವಿಲ್ಲ. ಅದಕ್ಕಾಗಿಯೇ ದುಃಖ ಪಡುವವರು ಭಾಗ್ಯವಂತರು. ಯಾಕೆಂದರೆ ಅವರಿಗೆ ಸಮಾಧಾನವು (ಸ್ವರ್ಗದಲ್ಲಿ) ಕೊಡಲ್ಪಡುವದು.‡ ಎಂಬಂಥ ಉಪದೇಶಗಳು ಅನುಕೂಲ. ಇಲ್ಲಿ ತಿರುಪೆಯೆತ್ತುವ ಲಾಜರಸ್ * ನಿಗೆ ಅಲ್ಲಿ ಸ್ವರ್ಗದಲ್ಲಿ ಅಬ್ರಹಾಮನ ಎದೆಯೇ ಸುಖಾಸನ! ಸ್ತ್ರೀ ಶೂದ್ರರೂ ಅಲ್ಪ ಸ್ವಲ್ಪ ಪರಿಪೋಷಣೆಗೆ ಮರುಳಾಗಿ ಸಂಕಲೆಗಳನ್ನು ಆಭರಣಗಳೆಂದು ಭಾವಿಸಿ ಮುದ್ದಿಡುತ್ತಾರೆ. ತಾವು ಹುಟ್ಟಿದ್ದೇ ಹಾಗೆ, ದೇವರು ತಮ್ಮನ್ನು ಹುಟ್ಟಿಸಿದ್ದೇ ಹೀಗಿರಲಿಕ್ಕಾಗಿ ಎಂದು ಭಾವಿಸಿ ಕಾಲವನ್ನು ಕಳೆಯುತ್ತಿದ್ದಾರೆ. ಈ ನೈಚ್ಯಾನುಸಂಧಾನ ಹೀನತ್ವ ಸಂಕುಲತೆಯಿಂದ ಅವರು ದುರ್ಬಲರಾಗಿರುತ್ತಾರೆ. ಅವರು ಕಣ್ಣೆತ್ತಿ ತಮ್ಮ ಯಜಮಾನರನ್ನೂ ಅವರಿಗೆ 'ದೇವರು ಕೊಟ್ಟ' (?) ವೈಭವವನ್ನೂ ನೋಡುತ್ತ ನೋಡುತ್ತ ತಾವೇ ದರಿದ್ರರಾಗಿರುತ್ತಾರೆ. ಲಾಲನೆಯ ಗುಲಾಮಳಾಗಿರುವ ಹೆಂಗಸಿಗೆ ತಾನು ಹೊರುವ ವಜ್ರ ಕೆಂಪುಗಳ ಮಿಂಚ

‡ ಸೈಂಟ್ ಮೆಥ್ಯೂಸ್ ೫-೪

* ,, ಲೂಕ್ ೧೬-೧೯ ರಿಂದ ೩೧

ನಲ್ಲಿಯೂ ಬೆಳ್ಳಿ ಬಂಗಾರದ ಭಾರದಲ್ಲಿಯೂ ಪಟ್ಟೆ ಪೀತಾಂಬರಗಳ ಮುಸುಕಿನಲ್ಲಿಯೂ ಶಾಶ್ವತ ಅರಸಿಣ ಕುಂಕುಮಕ್ಕಿಂತ ಹೆಚ್ಚಿನ ಪ್ರಪಂಚವೇ ಕಾಣುವದಿಲ್ಲ! "ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಿ"- ಯಜಮಾನರ ವೈಭವವನ್ನು ಮೇಲೆ ಮೇಲೆ ನೋಡುತ್ತ ತಾವೇ ಕೆಳಗೆ ಪಾತಾಳಕ್ಕಿಳಿದರು ಸ್ತ್ರೀ ಶೂದ್ರರಿಬ್ಬರೂ. ಆದರೂ ಮೂಢ ಭಕ್ತಿ ಕುರುಡು ಕೋರಿಕೆಗಳಿಷ್ಟಿದ್ದರೂ ಇವರು ಸಾಮಾನ್ಯ ಮಾನವ ಜೀವಿಗಳೇ ಅಷ್ಟೆ? ಇಂದ್ರಿಯ ಸುಖಗಳನ್ನು ಕೋರುವವರೇಯಷ್ಟೆ? ಎಡೆಬಿಡದ ಪರಾಧೀನತೆಯಲ್ಲಿ ಇವು ಲಭಿಸುವದಸಾಧ್ಯ ಎಂದು ಹಿಂದೊಮ್ಮೆ ಹೇಳಿದೆ. ಹೀಗಿರುವಾಗ ಜೀವಿತದಲ್ಲಿ ನಿರುತ್ಸಾಹವು ಸಹಜವಾಗಿಯೇ ಮೊದಲಾಯಿತು. ಬೇಸರ ಹುಟ್ಟಿತು. ತಾತ್ಸಾರ ಹುಟ್ಟಿತು. ಬರಬರುತ್ತ ಜೀವಿತವೇ ಒಂದು ದುಃಖಸಾಗರವೆಂಬ ಮುದ್ರಿಕೆಯು ಬಿತ್ತು. ಅದಕ್ಕೆ ತಕ್ಕ ಸೂತ್ರ ಶಾಸ್ತ್ರ ಸಿದ್ಧಾಂತಗಳೂ ಹೊರಟವು. ಆದರೂ ಜೀವಿತವನ್ನು ಬಿಡುವದು ಸಾಧ್ಯವಲ್ಲ. ಮತ್ತು **ಇವೇನೋ ಅನಿವಾರ್ಯವಾಗಿ ನಡೆಯುತ್ತಲೇ ಇವೆ ಆದರೆ ನಿರುತ್ಸಾಹದಿಂದ** ಸ್ತ್ರೀ ಪುರುಷರೂ ಆದರಲ್ಲಿದ್ದಾರೆ. ಪ್ರಕೃತಿಯ ಒತ್ತಾಯದಿಂದಲೇ ಸಂಸಾರಕ್ಕೆ ಹೆಚ್ಚಾಗಿ ಅಂಟಿಕೊಂಡು ಹೋದ ಹೆಂಗಸರಿಗೆ ಇವರು ಸಂಸಾರತ್ಯಜಿಸಿದರೆ, ಇವರನ್ನು ಬಿಟ್ಟರೆ ಅನ್ನ ಬಟ್ಟೆಗಳಿಗೆ ಬೇರೆ ಗತಿಯುಲ್ಲ. ಹೀಗಿರುವಾಗ ಹೆಂಗಸರು ಗಂಡಸರನ್ನು ಬಲಿಸಿಟ್ಟುಕೊಳ್ಳುವದನ್ನೇ ತಮ್ಮ ಮುಖ್ಯಸಾಧನವನ್ನಾಗಿಟ್ಟುಕೊಂಡರು. ವ್ರತಗಳು ಹುಟ್ಟಿದವು. ನಿಯಮಗಳುಂಟಾದವು. ಮಹಾಭಾರತ ಕಾಲದಲ್ಲಿಯೂ ಅನಂತರವೂ ಕಲೆಗಳನ್ನು ಹೆಂಗಸರು ಕಲಿಯುವದಾಯಿತು. **ಏನು ಮಾಡಿದರೂ ಗಂಡನನ್ನು ಸಂತೋಷಗೊಳಿಸಲಿಕ್ಕೇ.** ಸಂಸಾರದಲ್ಲಿ ಮಕ್ಕಳಿಗೆಲ್ಲಿಯೋ ಒಂದು ಮೂಲೆ. ಆತನು ಹಿರಿಯನಾದರೂ ಆತನ ಆಯುರಾರೋಗ್ಯಗಳಿಗಾಗಿಯೇ ವ್ರತ

ದುಷ್ಟ ವಾತಾವರಣದ ವಕ್ರವೃತ್ತಿಗಳ್ನು ಸಿದ್ಧಾಂತಗಳು.

ನಿಷ್ಠೆಗಳು ಹೆಚ್ಚು! ಮಕ್ಕಳ ಹಿತವಿಕಾಸಕ್ಕಾಗಿ ನಮ್ಮಲ್ಲಿ ಎಷ್ಟು ವ್ರತಗಳಿವೆ? **ಸಂಸಾರವನ್ನು ಬಿಡಲು ಯತ್ನಿಸುವದೇ ಈತನಿಗೆ ಧರ್ಮವಾಗಿ ಬಿಟ್ಟಿತು. ಮಕ್ಕಳಿಗಾಗಿಯೂ ತನ್ನ ಅನಾಥ ಸ್ಥಿತಿಗಾಗಿಯೂ ಆತನನ್ನು ಒಲಿಸಿಡುವದೇ ಈಕೆಯ ಧರ್ಮವಾಯಿತು!** ವ್ರತ ನಿಯಮ ಕಲೆಗಳು ಎಲ್ಲವೂ ನಿಷ್ಫಲವಾದಾಗ ಹೊಸ ಉಪಾಯಗಳನ್ನು ಕಂಡು ಹಿಡಿಯಬೇಕಾಯಿತು ಈಕೆಗೆ. ಇವುಗಳು ಬಹಿರಂಗವಾಗಿದ್ದರೆ ಪ್ರಯೋಜನವಿಲ್ಲ. ವಶೀಕರಣಕ್ಕಾಗಿ ಮಂತ್ರ, ತಂತ್ರ, ಯಂತ್ರ, ಔಷಧ (ಮೆಚ್ಚುಮದ್ದು) ಗಳ ಯುಗವು ಮೊದಲಾಯಿತು. ಗುಟ್ಟು ಗುಟ್ಟಿನ ರೀತಿಗಳು ಮೊದಲಾದವು. ಗಂಡನಿಗೆ ಹೆಂಡತಿಯಲ್ಲಿ ನಂಬಿಕೆಯಿಲ್ಲ, ಈಕೆಗೆ ಅವನಲ್ಲಿ ನಂಬಿಕೆಯಿಲ್ಲ! ಆದರೂ ಸಂಸಾರವನ್ನು ಬಿಡುವಷ್ಟು ಶಕ್ತಿ ಇಬ್ಬರಿಗೂ ಇಲ್ಲ. ಅದಕ್ಕೆ ಹೊಸ ಉಪದೇಶಗಳು ಮೊದಲಾದವು. ಅವುಗಳನ್ನು ಯಜಮಾನ ವರ್ಗಕ್ಕೆ ಸೇರಿದ ಗಂಡಸೇ ಬರೆದಿರುತ್ತಾನಾದುದರಿಂದ ಮತ್ತೆ ಹೆಂಗಸಿಗೇ ನಿಂದೆ! ದೃಷ್ಟಾಂತಕ್ಕೆ ಸರ್ವಜ್ಞನ ಕೆಲವು ವಚನಗಳನ್ನೇ ನೋಡೋಣ:-

ಹೆಂಡರಾ ಕೃತಕವನು । ಗಂಡರು ಬಲ್ಲರೇ । ಗುಂಡಿಗೆ ನೀರಾಗೆ ಕಿರಿಮೊನ ಹೆಜ್ಜೆಯನು । ಕಂಡವರಾರು ಸರ್ವಜ್ಞ ॥

ತುಂಬಿದಂತಿರಬೇಕು । ನಂಬದೆಯಿರಬೇಕು । ಯೆಂಬರಿದು ಯಚ್ಚತ್ತಿರಬೇಕು ಹೆಂಣನು । ನಂಬಿದವ ಕೆಟ್ಟ ಸರ್ವಜ್ಞ ॥

ಹೇಗಿದೆ ಕುಹನೆಯ ಮಂತ್ರೋಪದೇಶ! ಆದರೆ ಸರ್ವಜ್ಞ ಭರ್ತೃಹರಿಗಳಂಥ ನಿರಾಶರು ಉಪದೇಶಕರು ಏನು ಮಾಡ್ಯಾರು- ಪಾಪ. ದೊಡ್ಡವರಾದರೂ ಕೃತ್ರಿಮ ವಾತಾವರಣಕ್ಕೆ ಬಿದ್ದು ಈ ವಿಚಾರದಲ್ಲಿ ಬಿಡಿಸಿಕೊಳ್ಳಲಾರದ ಪ್ರಾಣಿಗಳು!

ಸ್ತ್ರೀ ಶೂದ್ರರ ಅಜ್ಞಾನವು ಸುಖದ ನಟನೆಯನ್ನು ಎಷ್ಟು ಮಾಡಿದರೂ ಅದು ನಿಜವಾದ ಸುಖವಾಗಲಾರದು. ಆ ವಾತಾವರಣದಲ್ಲಿ ನಿರುತ್ಸಾಹವೇ ಅಧಿದೇವತೆ. ಈ ಪರಾಧೀನತೆಯಿಂದ ತಪ್ಪಿಸಿಕೊಳ್ಳುವದೇ ಅವರ ಗಮ್ಯವಾಗುತ್ತದೆ. ಆಕೆಯ ಆವಶ್ಯಕತೆಯು

ನವಮಾಸ ಹೊತ್ತು ಎದೆಹಾಲನ್ನಿತ್ತು ಮುಂದೆ ಬಾಯಿಗೆ ತುತ್ತಿ ಡುವದನ್ನು ಮುಗಿಸುವ ವರೆಗೇ. ಮುಂದೆ ಉಪನಯನ ಬರುತ್ತದೆ. ಬ್ರಹ್ಮಚರ್ಯ ಪ್ರಾರಂಭ. ಹುಡುಗನು ತಾಯಿಯ ಮಮತೆಗೆ ಗುಂಡು ಹಾಕಿ ಗುರು ಕುಲಕ್ಕೆ ತೆರಳಬೇಕೀಗ. ಬ್ರಹ್ಮಚರ್ಯದ ಈ ಭಾಗವು ಎಷ್ಟು ಅನೈಸರ್ಗಿಕವಾಗಿದೆ! **ನೈಸರ್ಗಿಕವಾಗಿ ಬಾಲ್ಯದಲ್ಲಿ ತಾಯಿ ಗಿಂತ ಹೆಚ್ಚಿನ ಗುರು ಸೃಷ್ಟಿಯಲ್ಲಿರಲಾರನು.** ಅಷ್ಟು ಚಿಕ್ಕ ವಯಸ್ಸಿನಲ್ಲಿ ಮಗನನ್ನು ತಾಯಿಯಿಂದಗಲಿಸುವದು ಧರ್ಮವಲ್ಲ; ತಾಯಿತನಕ್ಕವಮಾನ. ಸ್ತ್ರೀಗೆ ಸಂಘವು ಕೊಟ್ಟ ನೀಚ ಪದವಿಯ ಸಾಕ್ಷಿ. ಆ ಪುರುಷನು ಮಾಡಿಟ್ಟ ದೇವಧರ್ಮ ನಾಗರಿಕತೆಗಳಿಗೆ ಮಾನವು ಹಾಗೆಯೇ ಸಿಕ್ಕಬೇಕಾದರೆ ಪುರುಷನೇ ಅಲ್ಲವೆ ಗುರುವಾ ಗುವದು ಲೇಸು? ಹುಡುಗನು ಆಕೆಯಲ್ಲಿಯೇ ಬೆಳೆದು ಒಂದು ವೇಳೆ ತಾಯಿಯ ಗೋಳನ್ನು ತಿಳಿದುಕೊಂಡರೆ ಕೃತಜ್ಞತೆಗಾಗಿಯಾ ದರೂ ಆಕೆಯ ಪಕ್ಷವನ್ನು ವಹಿಸಿಯಾನು; ಪುರುಷ ಪ್ರಧಾನ ಸಂಸ್ಕೃ ತಿಗೆ ಅಪಾಯ ಬಂದೀತು. **ಅದಕ್ಕಾಗಿ ಕೃತ್ರಿಮ ಶಾಸ್ತ್ರಗಳ ಅಭ್ಯಾಸಕ್ಕೆ ಕೃತ್ರಿಮ ಶಿಕ್ಷಣ ಪದ್ಧತಿ, ಕೃತ್ರಿಮ ವಾತಾವರಣ!**

ವ್ರತ ಬ್ರಹ್ಮಚರ್ಯ

ಆತನು ಚನ್ನಾಗಿ ತಿಳಕೊಳ್ಳುವ ಹೆಂಗಸು ಎಂದರೆ ಮುಂದೆ ತನ್ನ ಹೆಂಡತಿಯೋ ಪ್ರೇಯಸಿಯೋ. ಹೆಂಡತಿಗೆ ಹೆಂಡತಿತನದ ಶಿಕ್ಷಣವಂತೂ ಮೊದಲೇ ಆಗಿಯೇ ಇರು ತ್ತದೆ. ಗಂಡನ ಮುಂದೆ ಹೀಗೇ ಇರಬೇಕು, ಹೀಗೇ ಇಷ್ಟೇ ಆಡ ಬೇಕು ಮಾಡಬೇಕು- ಮುಂತಾದ ಕಟ್ಟುಪಾಟುಗಳನ್ನು ತನ್ನ ತಾಯಿ ಯಿಂದಲೇ ಕಲಿತು ಗಟ್ಟಿ ಮಾಡಿಕೊಂಡು ಆಕೆಯು ಬಂದಿರುತ್ತಾಳೆ. ಹೀಗಿರುವಾಗ ಆಕೆಯ ಪ್ರಕೃತಿ, ಅದರ ನೈಸರ್ಗಿಕ ಗುಣಗಳು ಈತ ನಿಗೆ ಹೇಗೆ ತಿಳಿಯಬೇಕು? ನಟನೆಯೇ ಹೆಚ್ಚು ಈ ಜೀವನದಲ್ಲಿ. ಆಕೆಯ ಅಜ್ಞಾನವೆ ಇದಕ್ಕೆ ಹೆಚ್ಚಿನ ಬೆಂಬಲ! ಸಂತಾನೋ ತ್ಪತ್ತಿಗಾಗಿಯೇ ಕೂಟ. ಅಲ್ಲದೆ ಊಟದ ಸಮಯದಲ್ಲಿಯೂ ಸರಿಯಾ ಗಿಬ್ಬರೂ ಕೂತುಕೊಳ್ಳಬಾರದು. 'ಆತನು (ಹೆಂಡತಿಯೊಡನೆ) ಕೂಡಿ

ಕೊಂಡು ಉಣ್ಣದಿರಲಿ '* ಎಂದು ಧರ್ಮವೇ ಹೇಳುತ್ತದೆ! ಆಕೆಗೆ ಹೆಣ್ಣುಮಕ್ಕಳು ಸಹ ಹುಟ್ಟಕೂಡದು! ಹೆಣ್ಣುಮಕ್ಕಳನ್ನು ಬೇರೆ ಹೆಂಗಸರಿಗೆ ಕೊಟ್ಟು ಇಲ್ಲಿ (ತನ್ನ ಹೆಂಡತಿಯ ಗರ್ಭದಲ್ಲಿ) ಗಂಡನ್ನು ಹುಟ್ಟಿಸಲಿ§ ಎಂದು ಗಂಡನು ಪ್ರಾರ್ಥಿಸುತ್ತಾನೆ. ಈ ಮನಸ್ಸಿನ ಔದಾರ್ಯ ಎಷ್ಟು ನೀಚವಾಗಿದೆ? ಹೀಗಿರುವಾಗ ಹೆಂಗಸರ ಗೋಳು ಸರಲವಾಗಿ ಕಪಟನಟಗಳಲ್ಲಿದೆ ಆತನಿಗೆ ತಿಳಿದುಬರುವ ಸಂಭವವಿದ್ದರೆ ಆದೀಗ– ತಾನು ಮಗನಾಗಿರುವಾಗ ಹೆಂಗಸು ತಾಯಿಯಾಗಿರುವಾಗ ಅಂಥ ವಯಸ್ಸಿನಲ್ಲಿಯೇ ಈತನನ್ನು ಬೇರೆಯಾಗಿರಿಸಿದರಾಯಿತಲ್ಲವೆ? ಮತ್ತೆ ಪುರುಷರ ನಾಗರಿಕತೆಗೆ ಅಪಾಯವೇ ಇಲ್ಲ!

ಮತ್ತೀ ಬ್ರಹ್ಮಚರ್ಯವು ಎಂತಹದು. ಇದರಲ್ಲಿ ವಿಧಿಗಳಿಗಿಂತಲೂ ನಿಷೇಧಗಳು ಹೆಚ್ಚು. ಧೈರ್ಯ, ಸ್ಥೈರ್ಯ, ಸಾಹಸ, ಪರೀಕ್ಷಣ ಶೋಧಗಳನ್ನು ಬೆಳೆಸುವ ವಿಧಿಗಳು ಈ ಆಶ್ರಮಧರ್ಮದಲ್ಲಿ ಅಪರೂಪವೇ. **ನಿಷೇಧಾತ್ಮಕ ಉಪದೇಶಗಳು ಅಂದರೆ ಇದ್ದಂತೆಯೇ ಬದುಕುವ ರಕ್ಷೆಗಳು, ಬೆಳೆದು ಪ್ರಗತಿಯನ್ನೈದುವ ಸಾಧನಗಳಲ್ಲ.** ಬರೀ ಢಾಲುಗಳು, ಕತ್ತಿತುಪಾಕಿಗಳಲ್ಲ. ಮಾನವ ಚರಿತ್ರದ ಬಾಲ್ಯದ ಅವಸರಗಳು. ಯೌವನದ ಒತ್ತಾಯಗಳನ್ನು ಬದಿಗೊತ್ತಿ ಯೌವನದ ಹುರುಪನ್ನೂ ಅದರ ಫಲವನ್ನೂ ಮಣ್ಣಿಗೆ ಪಾಲುಮಾಡುವ ಭಾರಗಳು, ಅಸಡ್ಡೆಗಳು. ಭಯಸಂದೇಹಗಳೇ ಇವಕ್ಕೆ ಪ್ರಧಾನ ಕಾರಣಗಳು. ಬ್ರಹ್ಮಚರ್ಯವು ನಿಜವಾಗಿಯೂ ಸಗರ್ಭವೇಯಾಗಿದ್ದಿದ್ದರೆ ಅದು ಸಾಹಸ ಪರೀಕ್ಷಣಗಳ ಬುಗ್ಗೆಯೇ ಆಗಿರುತ್ತಿತ್ತು. ನ್ಯಾಯವಾಗಿ ನೋಡಿದರೆ ಬ್ರಹ್ಮಚರ್ಯವು ಮಾನವನ ಪ್ರಗತಿಗನುಕೂಲವಾದ ಬುದ್ಧಿ, ಭಾವ, ಕಾರ್ಯ, ಸಾಹಸ ಮುಂತಾದ ಅಂತಃಶಕ್ತಿಗಳ ಅಂಗಾಂಗಗಳನ್ನು ಅರಳಿಸಿ, ಅವುಗಳ ಸಮನ್ವಯವನ್ನುಂಟುಮಾಡುವ, ನಿಸರ್ಗದೊಡನೆ ಹೊಂದಿಕೆಯುಳ್ಳ ಸಾಧನವಾ

* ಗೃಹ್ಯಸೂತ್ರ (ಸಾಂಖ್ಯಾಯನ) ೪. ೨–೧೦

§ ಗೃಹ್ಯಸೂತ್ರ (ಸಾಂಖ್ಯಾಯನ) ೧. ೧೯–೬

ಗಿರಬೇಕು; ಅಲ್ಲದೆ ಹೆಜ್ಜೆಹೆಜ್ಜೆಗೂ 'ಜೋಕೆ, ಭದ್ರ' ಎಂದುಸಿರುವ ಅಜ್ಜಮ್ಮನ ರೋದನವಾಗಿರಕೂಡದು. ಧರ್ಮವು ಕೊಡುವ ಉಪದೇಶದಿಂದ ಈತನ ಮೊದಲ ಸಾಧನೆಯನ್ನು ಇನ್ನೂ ಚನ್ನಾಗಿ ತಿಳಿದುಕೊಳ್ಳಬಹುದು.

ಇದೋ ಮುಕ್ತಿಸಾಧನ ?

ಆತನು ಜನರ ಸಂಘಗಳಿಗೆ ಹೋಗದೆ ಇರಲಿ. (ಸಾಂಖ್ಯಾ ೪. ೧೨-೯) ಓಡದೆ ಇರಲಿ. (೪. ೧೨-೧೬) ಮರವನ್ನು ಹತ್ತದೆ ಇರಲಿ. (೪. ೧೨-೨೭) ಬಾವಿಯನ್ನು ಬಗ್ಗಿ ನೋಡದೆ ಇರಲಿ. (೪. ೧೨-೨೮) ಸುಡುಗಾಡಿಗೆ ಎಂದೆಂದಿಗೂ ಹೋಗದಿರಲಿ. (೪. ೧೨-೩೧ ಸ್ನಾತಕನು ನದಿಗೆ ಅಡ್ಡವಾಗಿ ಕೈಹಾಕಿ ಈಜದಿರಲಿ. (ಆಶ್ವಲಾಯನ) ಹೇಗಿವೆ ಕಟ್ಟಳೆಗಳು! ಸಾಹಸಕ್ಕೆ ಸಂಬಂಧಪಟ್ಟ ಒಂದು ಮಾತಾದರೂ ಇದೆಯೋ ಇವುಗಳಲ್ಲಿ?

ಇಂದ್ರಿಯಗಳ ಮತ್ತು ರೂಢಿಯ ಒತ್ತಾಯದಿಂದ ಇವರಿಗೆ ಸಂಸಾರ! ಇದು ಕಡಿಮೆಯಾದೊಡನೆ ಇವರು ತಪ್ಪಿಸಿಕೊಂಡು ಓಡಿ ಹೋಗುವದರಲ್ಲಿ ಸಂದೇಹವೇನು? ಈ ಓಟಕ್ಕೂ, ಗ್ರಂಥಗಳನ್ನು ಬರೆಯುವವರು ಅರಣ್ಯಕ್ಕೆ ಹೋಗುವದೇ ವೈರಾಗ್ಯದ ಪರಾಕಾಷ್ಠತೆ ಎಂದು ಸಮಾಧಾನ ತೆಗೆದರು. ಇಷ್ಟು ದಿನಗಳಿಂದೀ ಉಪದೇಶಗಳಿದ್ದು ಅರಣ್ಯದಲ್ಲಿ ಜನರಿಲ್ಲವಲ್ಲಾ ಎಂದು ಧರ್ಮಾತ್ಮರನ್ನು ಯಾರಾದರೂ ಕೇಳಿದರೆ 'ಅವರಲ್ಲಿದ್ದಾರೆ, ನಮ್ಮಂಥ ಪಾಮರರ ಕಣ್ಣುಗಳಿಗೆ ಮಾತ್ರ ಅವರು ಕಾಣುವದಿಲ್ಲ' ಎಂದು ಹೇಳುತ್ತಾರೆ! ಈ ಸುಳ್ಳು ಹೇಗೂ ಇರಲಿ. ಇವುಗಳ ಪರಿಣಾಮಗಳನ್ನು ನೋಡಬೇಕು:-

ಠಕ್ಕುವೈರಾಗ್ಯ

(೧) ವ್ಯಕ್ತಿಗೆ ಸಂಘದ ಗೊಡವೆಯಿಲ್ಲದೆ ಸ್ವಾರ್ಥದಿಂದುದ್ಭವಿಸಿದ ದುರ್ಗುಣಗಳಿಂದ ದೇಶದ ಜನಾಂಗವು ಛಿನ್ನಭಿನ್ನವಾಗಿ ಹೋಯಿತು. ಚಿಕ್ಕ ಚಿಕ್ಕ ವಿಚಾರಾಚಾರ ವ್ಯತ್ಯಾಸಗಳಿಗಾಗಿ ಎಷ್ಟೋ ಕುಲಜಾತಿಗಳಾದವು. ಉದಾ:- ಬ್ರಾಹ್ಮಣರಲ್ಲಿಯೇ ೨೦೦೦ ಪಂಗಡಗಳಿಗಿಂತ ಹೆಚ್ಚಿವೆ. ಪಂಜಾಬ್ ಸಾರಸ್ವತರಲ್ಲಿಯೇ ಸುಮಾರು ೪೬೯

ಪಂಗಡಗಳಿವೆ. ಕ್ಷತ್ರಿಯರಲ್ಲಿ ೫೯೦; ವೈಶ್ಯ ಶೂದ್ರ ಜೈನ ಲಿಂಗಾಯತರೂ ಇದ್ದಾರೆ. ಬಂಗಾಳ, ಬೊಂಬಾಯಿ, ಮದ್ರಾಸ ಪ್ರಾಂತಗಳ ವಿಷಯ ಬೇರೆ.

ಹಿಂದುಸ್ಥಾನದ ಇತಿಹಾಸದ ಸಾರಾಂಶವೆಂದರೆ 'ಒಳಗೊಳಗೇ ವಿಶ್ವಾಸಘಾತಕ' ಎಂದು ನಮ್ಮ ಹಲವು ದೇಶಾಭಿಮಾನವುಳ್ಳ ಇತಿಹಾಸಕಾರರು ಸಹ ಹೇಳಿದ್ದಾರೆ. ಅಲೆಕ್‌ಜಾಂಡರ್‌ನ ಕಾಲದಿಂದ ಈ ದುರ್ಗತಿಯನ್ನು ಕಾಣಬಹುದು. ಆತನು ಸಿಂಧುವನ್ನು ಅಟಕ್‌ದ ಹತ್ತಿರ ದಾಟಿದನು. ಅಲ್ಲಿ ಸ್ವದೇಶಕ್ಕೆ ವಿರುದ್ಧವಾಗಿ ಆತನಿಗೆ ಸಹಾಯವನ್ನಿತ್ತವನು ಒಬ್ಬ ಹಿಂದೂ ರಾಜನೇ. ಇಂಥ ದೃಷ್ಟಾಂತಗಳಿನ್ನೂ ಎಷ್ಟೋ ಇವೆ.

ಖೇದಾತ್ಮಕ ಪರಿಣಾಮ

(೨) ದೈಹಿಕ ಸುಖವನ್ನೇ ಧರ್ಮದ ಮುಸುಕಿನಲ್ಲಿ ಪ್ರಧಾನವಾಗಿಟ್ಟುಕೊಂಡಿರೋಣದರಿಂದ ಲಾಂಪಟ್ಯ ದುರಾಚಾರ ಮತ್ತು ಬಹುಸಂಖ್ಯೆಯ ದಾಸ್ಯವು ಬೆಳೆಯಿತು; ಮಾತ್ರವೇ ಅಲ್ಲದೆ ಭಯಾನಕ ರೌಚಕ ಗ್ರಂಥಗಳು ಹುಟ್ಟಿದವು.

ಸಾಹಿತ್ಯ ಕಲೆಗಳು ಇವನ್ನೇ ಆಧಾರವನ್ನಾಗಿಟ್ಟುಕೊಂಡು ಇನ್ನೂ ಉದ್ಭವಿಸುತ್ತಲಿವೆ. ಅನೇಕ ನಾಟಕಗಳಿಗೆ ರಾಮಾಯಣ ಭಾರತ ಭಾಗವತಗಳೇ ಆಧಾರ. ಸಾಹಿತ್ಯದ ಕರ್ತವ್ಯವು ಜೀವಿತವನ್ನು ಸರಿಪಡಿಸುವದು; ಅವಿವೇಕಗಳನ್ನು ಸಲುವಳಿಸುವದಿಲ್ಲ. ನಮ್ಮ ಕಲೆಯಲ್ಲಿ ಕಲ್ಲು ಬಣ್ಣ ಇತ್ಯಾದಿಗಳಿವೆಯೇ ಹೊರತಾಗಿ ಜ್ಞಾನಗರ್ಭ ಯಥಾರ್ಥತೆ ಸೂಕ್ಷ್ಮತೆಗಳಿಲ್ಲ. **"ದೃಶ್ಯಪ್ರಪಂಚಕ್ಕತೀತ" ವಾಗುವ ರಭಸದಲ್ಲಿ ಅದೃಶ್ಯದ ಸಾಂಕೇತಿಕ ಕಲೆಯಲ್ಲಿ ಶಾಶ್ವತದ ತತ್ತ್ವವೂ ಇಲ್ಲ, ದೃಶ್ಯದ ಅಂಗಾಂಗ ಸೂಕ್ಷ್ಮತೆ** ಸತ್ಯತೆಗಳೂ ಇಲ್ಲ. ಅದು ಯೋಗಿಗಳ ಚಿತ್ರಕಲೆಯೂ § ಅಲ್ಲ, ಅನುಕರಣಪಟುಗಳ ಚಿತ್ರಕಲೆಯೂ* ಅಲ್ಲ

§ ಯೋಗಾಭ್ಯಾಸದಿಂದ ಶುದ್ಧವಾದ ಚಿತ್ತದಲ್ಲಿ ಹೊಳೆದ ದರ್ಶನವನ್ನು ಇತರರಿಗೆ ತಿಳಿಸುವದಕ್ಕೆ ಮಾಡಿದ ರೂಪಕ.

* ಬಾಹ್ಯಜಗತ್ತಿನ ದೃಶ್ಯಗಳನ್ನು ಅನುಕರಿಸುವದು.

(೩) ಜೀವಿತದಲ್ಲಿ ನೈಜದ ಅಭಿಮಾನವಿಲ್ಲದೆ ನಿರುತ್ಸಾಹವು ಹೆಚ್ಚಾಗಿರೋಣದರಿಂದ ಸಂಸಾರದಲ್ಲಿರಲಿಕ್ಕೂ ಆಗದೆ ಅದನ್ನು ಪೂರ್ತಿಯಾಗಿ ಬಿಟ್ಟು ಹೋಗಲಿಕ್ಕೂ ಆಗದೆ ಉಂಟಾದ ಅನೈಸರ್ಗಿಕ ಸ್ಥಿತಿಯಲ್ಲಿ ಸಮಾಧಾನದಿಂದಿರುವದಕ್ಕಾಗಿ ಸಾಧು, ಬೈರಾಗಿ, ಉದಾಸಿ ಮುಂತಾದ ಎಷ್ಟೋ ವಿಧ ವಿಧ ತಿರುಕ ತ್ಯಾಗಿಗಳು ಉಂಟಾಗಿ ದೇಶದ ಆರ್ಥಿಕ ಸ್ಥಿತಿಗೆ ಹುಳ ಹಿಡಿದು ಬಿಟ್ಟಿದೆ. **ಬ್ರಹ್ಮಚರ್ಯ ಸನ್ಯಾಸಗಳಿಗೆ ಎಡೆಬಿಡದ ವಿವೇಕ, ನಿಷ್ಠೆ ಆದರ್ಶ, ಧ್ಯಾನ, ವಿಶ್ವಪ್ರೇಮ ಈ ಸಾಧನಗಳು ಬೇಕು.** ಬಹಳ ಮಟ್ಟಿಗೆ ಅಂಗ ಸ್ವಭಾವವೂ ಅನುಕೂಲವಾಗಿರಬೇಕು. ಇವು ಇರುವದು ಕ್ವಚಿತ. ಜನಸಾಮಾನ್ಯಕ್ಕೆ ಇವು ಸಾಧ್ಯವಲ್ಲ, ಸಾಧುವಲ್ಲ. ಹೆಚ್ಚಿನ ಜನಸಂಖ್ಯೆಯು ಕೈಲಾಗದೆ ಕಠಿಣ ಮಾರ್ಗವನ್ನು ತುಳಿದರೆ ತಕ್ಕ ಯೋಗ್ಯತಃಸಾಧನಗಳ ಅಭಾವದಲ್ಲಿ **ಪ್ರಕೃತಿಯು ಇವರನ್ನು ಕುಟಿಲ ಮಾರ್ಗಕ್ಕೆ ಹಚ್ಚುವದು. ನಿಜವಾದ ಭಕ್ತಿಯೆಂದರೆ ತತ್ವವೇತ್ತರು ತತ್ವಾನುಸಂಧಾನದಲ್ಲಿ ರಮಿಸುವ ರೀತಿ, ಅವರು ಪಡುವ ಸೂಕ್ಷ್ಮಧ್ಯಾನಾನಂದ.**

ಸಾರಾಂಶ:- ಅಯಥಾರ್ಥ ಧರ್ಮದಲ್ಲಿರುವದೆಂದರೆ, ದೇಹಭೂಮಿಯಲ್ಲಿ ಮಿತಿಮೀರಿದ ಪಶುಜೀವನ. ಮನೋಭೂಮಿಯಲ್ಲಿ ಶಾಸ್ತ್ರ ಸೂತ್ರ ಸಾಹಿತ್ಯ ಕಲೆಗಳಿಂದ ಆ ಹಾಳು ಜೀವನಕ್ಕೇ ಕೃತ್ರಿಮ ಸಮಾಧಾನ. ಕುಹಕತನ ವಂಚನಗಳೇ ಜಗದಲ್ಲೆಲ್ಲಿ ನೋಡಿದರೂ. ಭೌತಿಕ ಮಾನಸಿಕ ಸಾಂಘಿಕ ಜೀವನದ ವ್ಯಭಿಚಾರ. ಯುದ್ಧದ ಸೂಕ್ಷ್ಮ ಬೀಜಪುರಸ್ಕಾರಗಳೇ ಎಲ್ಲಿ ನೋಡಿದರೂ. ಎಲ್ಲ ಧರ್ಮಮತಗಳ ಸೂಕ್ಷ್ಮತೆರೆಯಲ್ಲಿ ಈಗ ತುಳಿಯುತ್ತಿರುವದು ಏಹಂಗಮ ಮಾರ್ಗವಲ್ಲ. ವ್ಯರ್ಥ ವ್ಯಯದ ಮಾರ್ಗ, ಹ್ರಾಸದ ಹಾದಿ! ದುಃಖಪರ್ಯವಸಾಯಿ ನಾಟಕದ ಮೊದಲನೆಯ ನೋಟಗಳಾಟವೇ ಧರ್ಮರಂಗದಲ್ಲಿಂದಿನವರೆಗೆ ನಡೆಯುತ್ತಿರುವದು!!

———

## ೭ನೆಯ ಪ್ರಕರಣ.

# ಸಹಜ ಸಮರಸ.



ಇಲ್ಲಿಯ ವರೆಗೆ ಸ್ವಾಸ್ಥ್ಯ, ಸಮಾಧಾನ, ಸಂಘಾಭಿಮಾನಕ್ಕಾಗಿ ಹುಟ್ಟಿ ಬಂದ ಧರ್ಮವನ್ನು ಚರ್ಚಿಸಿದ್ದಾಯಿತು. ಸತ್ಕಾರಾಭಿಲಾಷೆಯಿಂದ ಕಲ್ಪಿಸಲ್ಪಟ್ಟ ಬಹು ಕೃತ್ರಿಮ ಧರ್ಮಭಾಗವನ್ನೂ ವಿವರಿಸಿದ್ದಾಯಿತು. ಒಂದರ ಸ್ಫೂರ್ತಿಯು ಭಯ ಸಂದೇಹ‡ ಗಳಲ್ಲಿದೆ ಇನ್ನೊಂದರದು ಕೆಟ್ಟ ಸ್ವಾರ್ಥದಲ್ಲಿದೆ. ಇವೆರಡರ

ಪಥವ್ಯತ್ಯಾಸ

ಬೋಧವೂ ನಿಷೇಧಾತ್ಮಕವೇ. ಅದು ಮಳೆಯಂತಲ್ಲ ಚಪ್ಪರದಂತೆ. ಮರದಂತಲ್ಲ ನೆರಳಿನಂತೆ. ಜೀವಿತವನ್ನು ತಣಿಸಿ ಬೆಳೆಸುವ ಶಕ್ತಿಯೂ ಇಲ್ಲ. ಹಬ್ಬಿ ಫಲವನ್ನು ಕೊಡುವ ಶಕ್ತಿಯೂ ಇಲ್ಲ. ಬಹಿಷ್ಕಾರ, ಪ್ರಾಯಶ್ಚಿತ್ತ, ಪಂಚಗವ್ಯಗಳಿಗಿಂತ ಮುಂದೆ ಹೋಗಲಿಲ್ಲ. ಅಧೋಗತಿಗೆ ಹಚ್ಚುವದೆಲ್ಲವೂ, ಅದು ಎಂಥ ಶುಭನಾಮದಿಂದಲೇ ಮೆರೆಯಲಿ, ಅಧರ್ಮವೇ. ಈ ಜಾಗ್ರತೆಯಿಂದಿರುವದಕ್ಕೆ ಜ್ಞಾನವೇ ಬೇಕಾದ್ದು.

ಈ ಸಯುಕ್ತಿಕ ನೈಸರ್ಗಿಕ ವೀರಮಾರ್ಗದಲ್ಲಿರತಕ್ಕ ಪ್ರಧಾನ ಗುಣಗಳೆಂದರೆ ಸಂಯಮ, ಸಂಧಾನ, ಸಮನ್ವಯಗಳು- ಎಂದು

---

‡ ವೇದ ಮಂತ್ರಗಳ ಕಾರಣವನ್ನು ಮತ್ಸ್ಯ, ವಾಯು ಪುರಾಣಗಳು ಸಹ ಹೀಗೆ ಕೊಟ್ಟವೆ:—

(೧) ‘ ಅಸಂತೋಷಾದ್ಭಯಾತ್ಕ್ರೋಧಾನ್ಮೋಹಾಚ್ಛೋಕಾಚ್ಚ ಪಂಚಧಾ ’

( ವಾ. ಪು. ಅ ೧. ೫೯–೫–೬೧ )

(೨) ‘ ಪರಿತೋಷಾದ್ಭಯಾದ್ದು:ಖಾತ್ ಸುಖಾಚ್ಛೋಕಾಚ್ಚ ಪಂಚಧಾ ’

( ಮ. ಪು. ಅ ೧೪೨ )

ಈ ಕಾರಣಗಳನ್ನೆಲ್ಲ ಹಿಂದಿನ ಪ್ರಕರಣಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಧರ್ಮದ ಮೂಲ ಕಾರಣಗಳನ್ನು ಕುರಿತು ಈ ಪುರಾಣಗಳ ಶೋಧವು ಬಹು ಸ್ತುತ್ಯವಾಗಿದೆ.

ಜ್ಞಾನಿಗಳ ಮತ. ದರ್ಶನಗಳ ಸಾರ ಇವುಗಳಲ್ಲಿದೆ. ನಿಸರ್ಗದ ಒತ್ತಾಯವೂ ಇವುಗಳಲ್ಲಿದೆ. ಸಂಘದ ಸುಖವೂ ಇವುಗಳಲ್ಲಿದೆ. ವ್ಯಕ್ತಿಯ ವಿಕಾಸವೂ ಇವುಗಳಲ್ಲಿಯೇ ಇದೆ. ಸಂಯಮವನ್ನು ಕುರಿತು ಹಿಂದೆಯೇ ಸಂಘದ ಮೂಲವನ್ನು ಶೋಧಿಸುವಾಗ ಸಾಕಷ್ಟು ಬರೆದಿದೆ. ಅದರಿಂದಲೇ ಸಂಘವು ಹುಟ್ಟಿತೆಂದೂ ಬದುಕಿದೆಯೆಂದೂ ವಿವರಿಸಿದೆ. ಅದನ್ನು ಇಲ್ಲಿ ಹೆಚ್ಚಿಗೆ ವಿವರಿಸುತ್ತೇವೆ.

**ಸಂಯಮ ಸಂಧಾನ ಸಮನ್ವಯ**

ಇರುವೆ ನೊಣ ಹುಳ ಮುಂತಾದ ಜೀವಿಗಳ ನೈಜ ಗುಣಗಳನ್ನು ಪರೀಕ್ಷಿಸಿದರೆ ಏನು ತೋರಿಬರುತ್ತದೆಂದು ನೋಡೋಣ. ಯಂತ್ರದಂತೆ ಈ ಜೀವಿಗಳು ವರ್ತಿಸುತ್ತವೆ. ಈ ಪ್ರಾಣಿಗಳಿಗೆ ತಮ್ಮ ಆಹಾರ ಮೈಥುನಗಳಿಗಾಗಿ ಬೇಕಾದ ವಿಷಯಗಳಲ್ಲಿ ಆಕರ್ಷಣವಿದೆ. ಅಪ್ರಿಯ ವಸ್ತುಗಳಲ್ಲಿ ವಿಕರ್ಷಣವಿದೆ. (ಎಲ್ಲ ಪ್ರಾಣಿಗಳಲ್ಲಿಯೂ ಇದು ಮುಖ್ಯವಾಗಿದೆ. ಆದರೆ ವ್ಯತ್ಯಾಸಗಳೂ ಇವೆ. ಇವನ್ನು ಮುಂದೆ ತೋರಿಸಲಾಗುವದು. ಈ ಗುಣ ವ್ಯತ್ಯಾಸಗಳಿಲ್ಲದಲ್ಲಿ ರೂಪ ವ್ಯತ್ಯಾಸವಿದ್ದರೂ ಅವು ಕ್ರಿಮಿಕೀಟಗಳೇ.) ಇಂದ್ರಿಯಗಳಿಗೆ ಬೇಕಾದ ವಸ್ತುಗಳಲ್ಲಿ ಕಾಮ, ಬೇಡವಾದವುಗಳಲ್ಲಿ ಕ್ರೋಧ ಇದು ಸಹಜವೇ. ಕಪ್ಪೆ ಮೀನು ಪಶುಪಕ್ಷಿಗಳಲ್ಲೆಲ್ಲ ಈ ಸ್ಥಿತಿಯನ್ನು ಕಾಣಬಹುದು. ಆದರೆ ಮುಂದೆ ಜಿಂಕೆ ಆನೆ ಮುಂತಾದ ಕೆಲವು ಜೀವಿಗಳ ಕಡೆಗೆ ಬಂದು ನೋಡಿದರೆ ಕೆಲವು ವಿಶೇಷ ಗುಣಗಳು ಕಂಡು ಬರುವವು ಮುಂದೆ ಮುಂದೆಯೇ. ಕೂಡಿ ಒಂದೊಂದರ ದೇಹಸಂರಕ್ಷಣೆಯ ವ್ಯವಸ್ಥೆಯನ್ನು ಮಾಡಿ ಬಾಳುವದನ್ನು ನೋಡಬಹುದು. ತನಗೆ ಆಹಾರವು ಕಂಡು ಬಂದಲ್ಲಿ ಅದಕ್ಕೆ ಕೂಡಲೆ ತಾನೇ ಬಾಯಿ ಹಾಕುವದನ್ನು ಬಿಟ್ಟು ಆ ಒಂದು ಪ್ರಾಣಿ ಮಂದೆಯನ್ನೇ ಅಲ್ಲಿಗೆ ಕರೆದೊಯ್ಯುವದು; ಮಂದೆಯು ವಿಶ್ರಮಿಸುವಾಗ ಒಂದೆರಡು, ತಮ್ಮ ನಿದ್ರೆಯನ್ನು ತಡೆದು ಎಚ್ಚರಿಕೆಯಿಂದಿದ್ದು ವೈರಿ

ಗಳು ಬಂದೊಡನೆ ಮುಂದೆಗೇ ಸೂಚನೆಯನ್ನು ಕೊಟ್ಟು ಎಬ್ಬಿಸುವವು; ಇಂಥ ದೇಹಸುಖಸಂಯಮದ ದೃಷ್ಟಾಂತಗಳು ನಿಸರ್ಗದಲ್ಲಿ ಕಂಡು ಬರುತ್ತವೆ. ಇಲ್ಲಿ ಪಶುಗಳಲ್ಲಿ ಸಹ ಸಂಯಮ-ಸಂಘಬುದ್ಧಿಗಳು ಏಕಕಾಲದಲ್ಲಿಯೇ ಕಂಡು ಬರುತ್ತವೆ. ಈ ಸಂಯಮದಲ್ಲೇನು ಕಂಡು ಬರುತ್ತದೆ? **ಕರ್ತವ್ಯಬುದ್ಧಿ, ತ್ಯಾಗ.** ಸಹಜವಾಗಿ ಬೆಳೆದ ಮಾನವಸಂಘದಲ್ಲಿಯೂ ಈ ಗುಣಗಳು ಕಂಡು ಬರುತ್ತವೆ. **ಇದೇ ನಿಸರ್ಗವು ಮುಂದಿಡುವ ಹೆಗ್ಗುರುತು.** ಸಂಯಮದಿಂದ ಸಂಘಕ್ಕೆ ಲಾಭವಾಗುವದಂತೂ ವಿದಿತವಾಗಿಯೇ ಇದೆ. ತ್ಯಾಗದಿಂದ ವ್ಯಕ್ತಿಯ ಶಕ್ತಿಯೂ ಬೆಳೆಯುತ್ತದೆ. ಅದು ಹೇಗೆ? ಪ್ರತಿಜೀವಿಗೂ ಬದುಕುವ ಆಶೆ ಇದೆ. ಅದಕ್ಕೆ ತಕ್ಕ ಭಯಸಂದೇಹಗಳಿವೆ. ಮರಣಭೀತಿಯಿದೆ. ಮಾನವನಿಗೆ ಸಂಘಭೀತಿಯೂ ಇದೆ. ಭೀತಿಯು ಜೀವಿಯನ್ನು ಒಮ್ಮೊಮ್ಮೆ ಕಾಪಾಡುವ ಶಕ್ತಿಯಾದರೂ, ಒಟ್ಟಿನ ಮೇಲೆ ಬಗ್ಗಿಸುವ ಶಕ್ತಿ, ಜೀವಿತವನ್ನೇ ಕುಗ್ಗಿಸುವ ಮಹಾಮಾರಿ. ಹೀಗಿರುವಾಗ **ತ್ಯಾಗದಲ್ಲಿ ಭೀತಿಯು ಅಳಿಯುತ್ತ ಹೋಗುತ್ತದೆ.** ಹಾಗೇ ಜೀವಿಯ ಸುಖವೂ ಅರಳುತ್ತ ಹೋಗಬೇಕಲ್ಲವೆ? ಮತ್ತು ಸುಖವೇ ಅಲ್ಲವೆ ಜೀವಿತದ ಜೀವ ಜೀವಾಳ?

ತ್ಯಾಗದ ತಿರುಳು

ಮಾನವನಲ್ಲಿ ವಿಚಾರೋದಯವಾಗಿದೆ. ಆತನಿಗೆ ವಿಶೇಷ ಪ್ರಜ್ಞೆಯಿದೆ. ತನ್ನ ಆಚಾರವಿಚಾರಗಳ ಕಾರಣ ಪರಿಣಾಮಗಳನ್ನವನು ತಿಳಿದು ವರ್ತಿಸಬಲ್ಲ. ಹೀಗಿರುವಾಗ ಈ ತ್ಯಾಗ ಭೂಮಿಯಲ್ಲಿ ಉಂಟಾಗುವ ನಿರೋಧದ ತಿಳುವಳಿಕೆಯೂ ಆತನಿಗಿದೆ. ಅದನ್ನೂ ಬೆಳೆಸಬೇಕು. ವಿಚಾರವು ಸಹಾಯಕ್ಕೆ ಬರಬೇಕು. ಯಜಮಾನಿಕೆಯ ಆನಂದವು ಆತನ ಪ್ರಕೃತಿಯಲ್ಲಿಯೇ ಬಹು ದೊಡ್ಡದಾಗಿದೆ. ಹೀಗಿರುತ್ತ ತನ್ನ ಇಂದ್ರಿಯಗಳ ಮೇಲೆ ತನಗುಂಟಾದ ಯಜಮಾನಿಕೆಯಿಂದ ಆತನು ಬಹು ಸಂತುಷ್ಟನಾಗುತ್ತಾನೆ. ತ್ಯಾಗದಿಂದ ಅವನ ಆನಂದವು ಹೋಗುವದಿಲ್ಲ. ಸ್ಥೂಲರಂಗದ ದಾಸ್ಯವನ್ನು ಬಿಟ್ಟು ಸೂಕ್ಷ್ಮರಂಗವನ್ನೇರಿ ಆಳುತ್ತದೆ.

ವಿಜಯಾನಂದ

ಪಿಪೀಲಿಕಾಮಾರ್ಗದಲ್ಲಿಯೇ **ಅಂತರಸ್ಥವಾಗಿ ಬಂದ ಜೀವಿಯ ಈ ಅನುಭವದಲ್ಲಿ ಸಾಕಲ್ಯವಾದ ಉದ್ಧಾರದ ಉಪದೇಶವಿದೆ. ಇದೇ ಯೋಗಶಾಸ್ತ್ರದ ಮೂಲ.** ಸೂಕ್ಷ್ಮವಾಗಿರುವ ಆನಂದಕ್ಕೆ ತ್ಯಾಗವು ಬೇಕು. ತ್ಯಾಗಕ್ಕೆ ಸ್ವಾರ್ಥದ ಸಂಯಮವು ಬೇಕು. ಈ ಆನಂದದ ವ್ಯವಸಾಯದಿಂದ ತನಗೆ ಹಿತವಿಕಾಸ. ಅದರ ಸಹಕಾರಿ ತ್ಯಾಗದಿಂದ ಸಂಘದ ಹಿತವಿಕಾಸ. " ಜಗದ್ಧಿತಾಯ ಆತ್ಮನೋಮೋಕ್ಷಾಯ '' ದ ಜ್ಯೋತಿ ಇಲ್ಲಿದೆ. ನಿರೋಧವಿಲ್ಲದೆ ಈ ಯೋಗವಿಲ್ಲ. ಯೋಗಿಗಳು ಜೀವಿತವನ್ನು ಉತ್ತೇಜನೋತ್ತರಪರವ್ಯಾಪಾರವೆಂದು ಕರೆಯುತ್ತಾರೆ. ಅಂದರೇನು ? ವಸ್ತು ವಿಷಯಗಳು ಉತ್ತೇಜನಗಳು. ಮನಸ್ಸು ಇಂದ್ರಿಯಗಳು ಅವುಗಳ ಕಡೆಗೆ ಹರಿಯುವದಕ್ಕೂ, ಅವುಗಳನ್ನು ಬಿಟ್ಟು ಸರಿಯುವದಕ್ಕೂ ಉತ್ತರವೆನ್ನುತ್ತಾರೆ. ಉದಾ:- ಅನ್ನವು ಉತ್ತೇಜನ, ಅದನ್ನುಣ್ಣುವ ಆಶೆಯುಂಟಾಗುವದು ಉತ್ತರ; ಬೆಂಕಿ ಉತ್ತೇಜನ, ಅದನ್ನು ನೋಡಿ ಪಲಾಯನ ಮಾಡುವದು ಉತ್ತರ. ಇವು ಸಹಜ. ಚಿತ್ತವೃತ್ತಿಯ ರೀತಿಯದು. ಆದರೆ ಕರ್ತವ್ಯ ಬುದ್ಧಿಯಿಂದ ಹುರಿಗೊಂಡವನು ತನ್ನ ಆಹಾರವನ್ನು ಹಸಿದವನಿಗೆ ಕೊಡಬಹುದು. ಉರಿಯುವ ಬೆಂಕಿಯಲ್ಲಿ ಹಾರಿ ಕೈಲಾಗದ ಇನ್ನೊಂದು ಪ್ರಾಣಿಯನ್ನು ಕಾಪಾಡಬಹುದು. ತಾನು ಪ್ರೀತಿಸುವ ಗುಣರೂಪಲಾವಣ್ಯವತಿಯಾದ ಸ್ತ್ರೀ ತನ್ನ ಪ್ರಿಯಸ್ನೇಹಿತನನ್ನು ಪ್ರೀತಿಸುತ್ತಾಳೆಂದು ಕೇಳಿ ಅವರಿಬ್ಬರಿಗೆ ಸೌಕರ್ಯಪ್ರೋತ್ಸಾಹಗಳನ್ನು ಕೊಡುವದಕ್ಕಾಗಿ ತಾನು ಆ ದೇಶವನ್ನೇ ಬಿಟ್ಟು ಹೋಗಬಹುದು. ರೋಗಪೀಡಿತನಾದವನಿಗಾಗಿ ಒಂದು ಗಿಡಮೂಲಿಕೆಯನ್ನು ಹುಡುಕಿ ತರಲಿಕ್ಕೆ ಘೋರ ಅರಣ್ಯಕ್ಕೆ ಹೋಗಬಹುದು. ಇವುಗಳಲ್ಲಿ ಆತನ ನಿಸರ್ಗದ ಸಹಜಧಾಟಿಯಿದೆಯೋ? ಇಲ್ಲ. ಅವುಗಳ ಸಂಯಮವಿದೆ. ಇದಕ್ಕೆ ಉಪರತಿಯೆಂದೆನ್ನುವರು. **ಇಲ್ಲಿ ಉತ್ತೇಜನೋ* ತ್ತರ§ ಗಳ ನಡುವೆ ಉಪರತಿ ‡**

**ಉತ್ತೇಜನ, ಉತ್ತರ, ಉಪರತಿ.**

* Stimulus. § Response. ‡ Inhibition.

**ಯಬು ಬಂತು.** ಇಂದ್ರಿಯಾತೀತವಾದ ಸೂಕ್ಷ್ಮಾನಂದವೂ ಬಂತು. ಇತರರಿಗೂ ಹಿತವಾಯಿತು.

ಸ್ಫುಟವಿವೇಕದಿಂದ ಯುಕ್ತಾಯುಕ್ತಗಳನ್ನು ನೋಡಿ ಇಂಥ ಸೂಕ್ಷ್ಮಾನಂದ ಪ್ರಪಂಚವನ್ನೇ ಉಂಟುಮಾಡಬೇಕು. ಮಾನವೇತರ ಜೀವಿಗಳಿಗೆ ಉತ್ತೇಜನವು ಸ್ಥೂಲ ಭೂಮಿಯಲ್ಲಿಯೇ ಇದೆ. ಮಾನವನಿಗೆ ಮಾನಸಿಕ ಪ್ರಪಂಚವೇ ವಿಶೇಷವಾಗಿ ಬಂದಿದೆ. ಅಲ್ಲಿ ಆತನು ಸ್ವತಂತ್ರನಾಗಿ ಉತ್ತೇಜನಗಳನ್ನುಂಟುಮಾಡಬಲ್ಲ. ಉತ್ತರ* ಗಳನ್ನು ಕೊಡಬಲ್ಲ. ಉತ್ತೇಜನಗಳು ಶುದ್ಧವಾದಂತೆ ಉತ್ತರಗಳೂ ಶುದ್ಧವಾಗುತ್ತವೆ. ಈ ಉತ್ತರಗಳ ಸಂಚಯಸಾರಗಳಿಗೇ ಅಲ್ಲವೆ ಗುಣವೆನ್ನುವದು? ಈ ಗುಣವೇ ಮಾನವನಿಗೆ ಭೂಷಣವಲ್ಲವೆ? ತ್ಯಾಗವೇ ಸೂಕ್ಷ್ಮಾನಂದದ ತಿರುಳು, ಅನಂತ ಜೀವಸೋಪಾನಪಥದಲ್ಲಿ ಮಾನವನಿಗೆ **ನಿಸರ್ಗವೇ** ಕಣ್ಣಿಗೆ ಹೊಳೆಸಿದ ಬೆಳಕು. ಆದರೆ ಇದು ಸೃಷ್ಟಿಯಲ್ಲಿ ಇದೆಯಾದರೂ ಸರ್ವಸಾಮಾನ್ಯವಲ್ಲ. ಹೀಗಿರುವಾಗ ಇದಕ್ಕೆ ತಕ್ಕ ಉತ್ತೇಜನವೂ ಬೆಳಕೂ ಆತನಿಗೆ ಸ್ಥೂಲ ಸೃಷ್ಟಿಯಲ್ಲಿಯೇ ಸಿಕ್ಕಲಾರದು. ವಿಶಿಷ್ಟ ಉತ್ತರಸಾಧನಕ್ಕೆ ಅವಕಾಶವಿರಲಾರದು. ಈ ಉತ್ತರಗಳ ಅಭ್ಯಾಸವಾಗದೆ ಸಹಜಸದ್ಗುಣಗಳು ಆತನಿಗೆ ಮೈಗೂಡಲಾರವು. **ಅದಕ್ಕಾಗಿ ಆತನು ತನ್ನ ಬುದ್ಧಿಭಾವ ಕೃತಕಶಕ್ತಿಗಳಿಂದಲೂ ಹೊಸ ಸೃಷ್ಟಿಯನ್ನೇ ನಿರ್ಮಿಸಬೇಕು.** ದೈವ, ಧರ್ಮ, ಕಾವ್ಯ, ಕಲಾ, ಸಾಹಿತ್ಯಗಳ ಉದ್ದೇಶವೂ ಇಂಥ ಸೃಷ್ಟಿಯೇ. ಹೊಸ ಉತ್ತೇಜನ ಹೊಸ ಉತ್ತರ ಹೊಸ ಉಪರತಿ ಹೊಸ ಗುಣವರ್ತನ ಹಾಗೂ ಹೊಸ ಜೀವನವನ್ನೇ ಕೊಡುವ ಸೃಷ್ಟಿಗಳಿವು. **ಇವುಗಳ ಗಮ್ಯವೇ ಸಹಜವಾದ ದೇವರು. ಇವುಗಳ ಸ್ಫೂರ್ತಿಯೇ ನೈಸರ್ಗಿಕ ಧರ್ಮ.** ಕವಯಃ ಕ್ರಾಂತಿದರ್ಶಿನಃ ಎಂದೇ ಮಹಾನುಭಾವರ ಮತ. ತಾತ್ತ್ವಿಕ ಹಿಂದೂ ಧರ್ಮವು ಆದಕ್ಕಾಗಿಯೇ ಇವುಗಳಿಗೆಲ್ಲ ಒಂದೇ ತಿರುಳನ್ನು ನಿರ್ಮಿಸಿ ಇವನ್ನೆಲ್ಲವನ್ನೂ ಏಕರೀತಿಯಾಗಿ ಆದರ್ಶಿಸುತ್ತದೆ. ಆದರೆ

ನವಸೃಷ್ಟಿ

* ಈ ಪ್ರಕರಣದಲ್ಲಿ ಉತ್ತೇಜನ ಉತ್ತರ ಉಪರಿತಿ ಈ ಶಬ್ದಗಳು ತಮ್ಮ ವಿಶೇಷ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ.

ಅಂಥ ಆದರಕ್ಕೆ ಇವು ತಮ್ಮ ಉದ್ದಿಶ್ಯವನ್ನು ಮಾತ್ರ ಮರೆತಿರಬಾರದು. ಈ ಹೃದಯ ಒಂದಿದ್ದರೆ ಕಲ್ಲಮೂರ್ತಿಯೂ ಪೂಜ್ಯವೇ. ಎಲ್ಲವೂ ಪೂಜ್ಯವೇ. ಇದಿಲ್ಲದ ದೇವರೂ ಕಲ್ಲೇ. ಸದ್ಗುಣಸಂಪನ್ನತೆಯನ್ನು ಕೊಡುವ ಇಂಥ ಶುದ್ಧ ಮಾನಸಿಕ ಪ್ರಪಂಚವನ್ನು ರಚಿಸಿ ಅದರಲ್ಲಿದ್ದು ರಮಿಸುವ ಸಾಧನಕ್ಕೇ ಸಂಧಾನ ಎಂದು ಹೆಸರು. ಇಲ್ಲಿ ಅವರತ್ವವು ಹೋಗುತ್ತ ಅಮರತ್ವವು ಹೊಳೆಯುತ್ತದೆ.

ಇಂಥ ತಾತ್ತ್ವಿಕ ಧರ್ಮಕ್ಕೆ ದೇವರು ಎಂದರೆ ಸೂಕ್ಷ್ಮಾನಂದದ ಬುಗ್ಗೆ. ಸಂಯಮದ ಜೀವಜೀವಾಳ. ಒಳಗೆ ಕೂತು ಅಲ್ಲಿಯ ಅಂತಃಶಕ್ತಿಗಳನ್ನು ಎಬ್ಬಿಸಿ ಮೇಲಕ್ಕೆತ್ತಿ ಜೀವಿತವನ್ನು ಸಾರ್ಥಕಗೊಳಿಸುವ ಶಕ್ತಿ ಅದೂ ಧ್ಯಾನಕ್ಕವಶ್ಯವೆಂದು ತೋರಿದರೆ. * ಆತನು ವ್ಯಕ್ತಿಯಲ್ಲ. ಮತಸ್ಥಾಪಕ ಪ್ರೇರಕನಲ್ಲ. ಸಂಯಮಕ್ಕೆ ಸಹಾಯ. ತಸ್ಯ ಭೂಮಿಷು ವಿನಿಯೋಗಃ § ಎಂದು ಯೋಗಸೂತ್ರವಿದೆ. ಸಂಯಮದಿಂದ ಒಂದು ಭೂಮಿಕೆಯು ವಶವಾದ ಮೇಲೆ, ಕೂಡಲೆ ಮುಂದೆ ಬರುವ ಇನ್ನೊಂದು ಭೂಮಿಕೆಗೆ ಅದು ಹಚ್ಚಲ್ಪಡುತ್ತದೆ.

ಸಾಧನ

ಕೆಳಗಿನ ಭೂಮಿಕೆಯನ್ನು ಜಯಸದವನು ಮೇಲಿನದಕ್ಕೆಂದಿಗೂ ಹೋಗಲಾರನು– ಎಂದು ಈ ಸೂತ್ರಕ್ಕೆ ವ್ಯಾಸನ ಟೀಕೆಯಿದೆ. ಇಂಥ ಚಿತ್ತಶುದ್ಧಿಗೆ ಬೇಕಾದ ದೇವಸಂಯಮಗಳಿಗೆ ಪ್ರಿಯಾಪ್ರಿಯ ವಿಷಯಗಳಾವವೆಂದು ನೋಡೋಣ:– ಮೈತ್ರಿ, ಕರುಣಾ, ಮುದಿತಾ (ಅಂದರೆ ಸಂತೋಷ) ಇವುಗಳ ವ್ಯವಸಾಯ; ಮತ್ತು ಪುಣ್ಯ ಅಪುಣ್ಯ ಸುಖದುಃಖ ವಿಷಯಗಳಿಗೆ ಉಪೇಕ್ಷೆ. * ಇಂಥ ಸಾಧನೆಗೆ ವೈರಿಗಳಾವವು ಎಂದರೆಃ– ವ್ಯಾಧಿ, ಸಂಶಯ, ಚಿತ್ತವಿಕ್ಷೇಪ, ಆಲಸ್ಯ, ಭ್ರಾಂತಿ. ಅವಿರತಿ (ಅಂದರೆ ಇಂದ್ರಿಯ ಲೋಲುಪತೆ), ಪ್ರಮಾದ (ಅಜಾಗ್ರತೆ)§ ಈ ಮಾರ್ಗದಲ್ಲಿ ಎಲ್ಲಿಯಾದರೂ ಹಿಂದಿನ ಪ್ರಕರಣಗಳಲ್ಲಿ ವಿವರಿ

---

* ಪಾತಂಜಲಿ– ಯೋಗಸೂತ್ರ ೧. ೨೩ ನೋಡಿ.

§ ,, ,, ೩. ೬ ,,

* ಪಾತಂಜಲಿ– ಯೋಗಸೂತ್ರ ೧. ೩೩ ,,

§ ,, ,, ೧. ೩೦ ,,

ಸಿದ ಅವಿಚಾರ, ನಿರ್ವೀರ್ಯತೆ, ಸಲುವಗಳಿವೆಯೋ? ವ್ಯಕ್ತಿಸಂಘ ಗಳ ಜವಾಬ್ದಾರಿಗಳ ಕಡೆಗೆ ಉಪೇಕ್ಷೆಯಿದೆಯೋ? ಭಯರುಚಿಗಳ ಗೊಂದಲವಿದೆಯೋ? ನಿರುತ್ಸಾಹಕ್ಕೆ ಸಂದರ್ಭವಿದೆಯೋ? ತಪ್ಪಿಸಿ ಓಡಿಹೋಗುವದೇ ಧರ್ಮ ಎಂಬ ಸೂಚನೆ ಎಲ್ಲಿಯಾದರೂ ಇದೆಯೋ? ಅಥವಾ ಜೀವಿಯ ಸಕಲ ಶಕ್ತಿಗಳ ಹಿತವಿಕಾಸಉಪಯೋಗಗಳೇ ಯೋಗವೆಂಬ ಧ್ವನಿಯಿದೆಯೋ?

ಈ ಸಯುಕ್ತಿಕ ಧರ್ಮವು ನೈಸರ್ಗಿಕ ಶಕ್ತಿವಿನಾಶವಲ್ಲ. ಅದರ ವಿಕಾಸ. ಅವುಗಳಲ್ಲಿಯೇ ಆದಿಶಕ್ತಿಯ ಜಾಜ್ವಲ್ಯ ಪ್ರಕಾಶವನ್ನು ಪ್ರತಿಬಿಂಬಿಸುವ ಸ್ಫುಟವಾದ ವಿಧಿಸಾಮ್ರಾಜ್ಯ.

ಈ ಉಚ್ಚ ಧರ್ಮದ **ಬೋಧವು ಜೀವಸೋಪಾನಪರಂಪರೆಯಲ್ಲಿಯೇ ನೈಸರ್ಗಿಕವಾಗಿದ್ದು ಹೊಳೆದು ಬಂತು** ಎಂದು ಮೊದಲೇ ಹೇಳಿದೆಯಷ್ಟೇ? ಬಿಡಿಯಾಗಿ ನೋಡಿದರೆ ಮಾನವನಲ್ಲಿರುವ ಇಂದ್ರಿಯ ಶಕ್ತಿಗಳಿಗಿಂತಲೂ ಇತರ ಅನೇಕ ಪ್ರಾಣಿಗಳಲ್ಲಿ ಅಧಿಕ ಶಕ್ತಿಯಿದೆ. ಈತನು ಮೀನಿನಂತೆ ನೀರಿನಲ್ಲಿರಲಾರ. ಹಲ್ಲಿಯಂತೆ ಮೇಲೂ ಕೆಳಗೂ ಸಂಚರಿಸಲಾರ. ಹಕ್ಕಿಯಂತೆ ಹಾರಲಾರ. ಜಿಂಕೆಯಂತೆ ಓಡಲಾರ. ನಾಯಿಯಂತೆ ಮೂಸಲಾರ. ಗಿಡಗದಂತೆ ನೋಡಲಾರ. ಇಲಿಯಂತೆ ಕೇಳಲಾರ. ಮೇಲೆ ಈತನು ಸೃಷ್ಟಿಯ ನಿಚ್ಚಣಿಗೆಯ ಮೇಲಿನ ಮೆಟ್ಟಲಿನಲ್ಲಿ ನಿಂತಿದ್ದಾನಂತೆ! ಕೆಳಗಿನವುಗಳ ಶಕ್ತಿಯೊಂದೂ ಅಷ್ಟಾಗಿಲ್ಲದೆ, ಈತನು ಹೆಚ್ಚಿನವನಾದನೆಂತು? ಆ ಶಕ್ತಿಗಳ ವಿನಾಶವೇ ವಿಕಾಸದ ರೀತಿಯೋ? ಹಾಗಲ್ಲ. ಜೀವಿತವು ಉತ್ತೇಜನೋತ್ತರಪರವೆಂದು ಹಿಂದೆ ಹೇಳಿದೆಯಲ್ಲವೆ? **ಉಪರತಿಯಲ್ಲಿ ಉತ್ತೇಜನಕ್ಕೆ ತಕ್ಕ ಉತ್ತರವಿಲ್ಲ.** ಅದಕ್ಕೆ ವಿರುದ್ಧವಾದ ಉತ್ತರಗಳನ್ನೂ ಕೊಡಬಹುದು ಉಪರತಿಯು ಬೆಳೆದಂತೆ; ಉತ್ತರ ಕೊಡದೆನೇ ಇರಲೂ ಬಹುದು. ಸಿಟ್ಟಿಗೆಬ್ಬಿಸಲು ಯತ್ನಿಸುವ ವೈರಿಯ ಅವಿವೇಕವನ್ನು ನೋಡಿ ಉಪರತಿಯುಳ್ಳವನು ನಗಬಹುದು; ಉತ್ತರವನ್ನೀಯದಿರಬಹುದು; ವೈರಿಯನ್ನು ಆಶೀರ್ವದಿಸಬಹುದು. ಜ್ಞಾನವಿಲ್ಲದೆ ಶಾಂತಿಯಿಲ್ಲದೆ ಸಂಘ ಹಿತೇಚ್ಛೆಯಿಲ್ಲದೆ ಆತನು ಹಾಗೆ

ಮಾಡುತ್ತಾನೋ? ನಿಸರ್ಗದಲ್ಲಿ ಮುಯ್ಯಿಗೆ ಮುಯ್ಯಿ. ಆದರೂ ಅದನ್ನವಲಂಬಿಸದೆ ಅದನ್ನು ಜಯಿಸಿ **ವಿಪರೀತ** ಉತ್ತರವನ್ನು ತೋರಿಸುವವನ ಶಕ್ತಿ ಭಾಂಡಾರವೆಲ್ಲಿದೆ? ಆ ಶಕ್ತಿಯು ಬಂತು ಹೇಗೆ? ಉತ್ತೇಜನಕ್ಕೆ ತಕ್ಕ ಉತ್ತರವಿದ್ದಲ್ಲಿ ಜಮೆಗೆ ತಕ್ಕ ಖರ್ಚು. ಗಂಟಿಗೆ ಬೀಳುವದೇನೂ ಇಲ್ಲ. ಅಂದರೆ ಗುಪ್ತಿ * ಯಲ್ಲಿ ಜಮೆಯಲ್ಲಿ ಏನೂ ಇಲ್ಲ. ಈ ಉತ್ತರಗಳ ನಿರೋಧವು ಹೆಚ್ಚಾದಂತೆ ಉತ್ತೇಜಿಸಲ್ಪಟ್ಟ ಶಕ್ತಿಯು ಗುಪ್ತಿಯಲ್ಲಿರುತ್ತದೆ. ಸೃಷ್ಟಿಯಲ್ಲಿ ಉಪರತಿಯು ಬೆಳೆದಂತೆ ಗುಪ್ತಿಯೂ ತಿಳುವಳಿಕೆಯೂ ಬೆಳೆದದ್ದು ನಮಗೆ ತೋರುತ್ತದೆ. ಸಾಕಿದ ನಾಯಿಯು ಯಜಮಾನನು ಸಿಟ್ಟಿಗೆದ್ದರೂ ಓಡದೆ ಭಯಪಡದೆ ಪ್ರೀತಿಯಿಂದ ಆತನ ಕಡೆಗೇ ಬಾಲವನ್ನಾಡಿಸುತ್ತ ಓಡಿ ಬರಬಹುದು. ಇದು ವಿಪರೀತವಲ್ಲವೇ? ಅದನ್ನೇ ಇಲಿ ಕಪ್ಪೆಗಳನ್ನು ಸಾಕಿಟ್ಟರೂ ನೋಡುವದು ದುರ್ಲಭ. ಈತನು ತನ್ನ ಯಜಮಾನನು ಎಂದು ತಿಳಕೊಳ್ಳುವ ಶಕ್ತಿಯೂ ಅದರ ಗುಪ್ತಿಯೊಡನೇ ಇದೆ. **ಉಪರತಿಯಿಂದ ಗುಪ್ತಿ, ಗುಪ್ತಿಯೊಡನೆ ಜ್ಞಾನ, ಜ್ಞಾನದಿಂದ ಸೂಕ್ಷ್ಮಭೂಮಿಯ ವಿಶೇಷಾನಂದ, ಸ್ಥೂಲ ಭೂಮಿಯ ಅಧಿಕಾರ.** ಇದು ಜೀವಿಯ ಒತ್ತಾಯ, ಪ್ರಯಾಣದ ಸರಲ ಮತ್ತು ತೀವ್ರ ಗತಿಯ ಸಾಕ್ಷಿ ಆದುದರಿಂದ ಪ್ರಗತಿಯಲ್ಲಿ ಗಿಡಗ, ಜಿಂಕೆ, ಮೀನು ನಾಯಿಗಳ ಶಕ್ತಿಯ ವಿನಾಶವಾಗಲಿಲ್ಲ. **ಗುಪ್ತಿಯಾಗಿದೆ, ರೂಪಾಂತರವಾಗಿದೆ, ವಿಕಾಸವಾಗಿದೆ. ಇವೆಲ್ಲವೂ ಬುದ್ಧಿಯನ್ನು ಹುಟ್ಟಿಸಿವೆ, ಬುದ್ಧಿಯಲ್ಲಿ ಒಂದಾಗಿವೆ, ಹಾಗೂ ಅದಕ್ಕಧೀನವಾಗಿವೆ.** ತನ್ನ ಈ ಬುದ್ಧಿಯಿಂದ ಮನುಷ್ಯನು ತಾನು ಹಿಂದೆ ಸರ್ವಾಂಗ ಸಮನ್ವಯಕ್ಕಾಗಿ ಬಿಟ್ಟ ಗುಣಗಳ ಬದಲು ಭರ್ತಿಗಳನ್ನು ಇನ್ನೂ ಅಧಿಕವಾಗಿ ತನಗೆ ಅಧೀನವಾಗಿರುವಂತೆ ರಚಿಸಬಲ್ಲ. ಬೇಕಾದಂತೆ ಹಡಗಗಳನ್ನುಂಟುಮಾಡಿ ಸಮುದ್ರವನ್ನೆಲ್ಲ ಸಂಚರಿಸಬಲ್ಲ, ವಿಮಾನಗಳನ್ನೇರಿ ವಾಯುಮಂಡಲವನ್ನೆಲ್ಲ ಹಾರಬಲ್ಲ, ‘ವಾಯರ್‌ಲೆಸ್’

ಗುಪ್ತಿಯು ಶಕ್ತಿ

* Reserve Conservation.

ಮೂಲಕ ಭೂಗೋಲದ ಒಂದು ಮೂಲೆಯಿಂದಿನ್ನೊಂದು ಮೂಲೆಗೆ ತನ್ನ ಕಿವಿಬಾಯಿಗಳನ್ನು ಮುಟ್ಟಿಸಬಲ್ಲ. ಬುದ್ಧಿಯ ಪ್ರಭಾವವಲ್ಲವೆ ಇದು? ಕನಿಷ್ಠ ಶಕ್ತಿಗಳನ್ನು ಸಂಯಮಿಸಿ ಸಮನ್ವಯಿಸಿ ಹುಟ್ಟಿಸಿದ ಬುದ್ಧಿಯ ಬಹುಧಾನಕ ಶಕ್ತಿಯು ಸಾಮಾನ್ಯವಲ್ಲ.

ಈ ಸಂಯಮಸಂಧಾನ ಸಮನ್ವಯಗಳ ಧರ್ಮವೂ ಮಾನವನ ಸೇವೆಗೆ ಉಪನಿಷತ್ ಕಾಲದಿಂದ ಕೈಕಟ್ಟಿ ನಿಂತಿದೆ. ಇಹಪರಗಳ ತುದಿಮೊದಲನ್ನೂ ಬಿಚ್ಚಿಟ್ಟ ಸಜ್ಞಾನ ಧರ್ಮವೂ ನಮ್ಮಲ್ಲೇ ಹುಟ್ಟಿ ಅನುಯಾಯಿಗಳನ್ನು ಕಾದಿದೆ. ದರ್ಶನಗಳೂ ಈ ಧರ್ಮವನ್ನೇ ವಿಧವಿಧವಾಗಿ ಮುಂದಿಟ್ಟು ವ್ಯುತ್ಪತ್ತಿರಾಜ್ಯದ ಸಿಂಹಾಸನವನ್ನೇರಿ ಹೋಗಿವೆ. ಗೀತೆಯೂ ಈ ಧ್ವನಿಯಿಂದಲೇ ಸಕಲ ಯೋಗಧರ್ಮಗಳ ಸಮನ್ವಯ ಗಾನವನ್ನು ಹಾಡಿಹೋಗಿದೆ. ಎಲ್ಲ ಕಡೆಗಳ, ಎಲ್ಲ ಕಾಲಗಳ, ಹೇತುವಾದಿಗಳ ವಿವಿಧ ಪ್ರಸ್ಥಾನ ಸಿದ್ಧಾಂತಗಳ ಸಾರವೂ ಒಂದೇ. ಆದರೆ ಇಂದಿನವರೆಗೆ ಮಾನವನ ಇತಿಹಾಸವು 'ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆಹಾಲ' ಎಂಬಂತಿದ್ದರೂ, ಸದಾ ಇಹಪರ ಸ್ವೇತರ ಸುಖಸ್ವಾತಂತ್ರ್ಯಗಳೇ ಅವುಗಳ ಧ್ಯೇಯ. ಶಾಶ್ವತ ಸುಖಸ್ವಾತಂತ್ರ್ಯಗಳ ಬುಗ್ಗೆಯೇ ಅವರು ಹುಡುಕುವ ದೇವನೆಂದರೆ. ಸಂಯಮ ಸಂಧಾನ ಸಮನ್ವಯಗಳೇ ಅವರ ಸ್ನೇಹದ ತ್ರಿಮೂರ್ತಿಗಳು. ಕೊನೆಯ ಮಾತೇನೆಂದರೆ- ನಿಜವಾದ ಧರ್ಮವು ಕ್ಷುದ್ರ ಸ್ವಾರ್ಥದ ದುರ್ಬಲ ರಕ್ಷೆಯಲ್ಲ; ಆಕಾಶದ ದೇವರನ್ನು ಬೇಡಿಸುವ ಷಂಢಭಿಕ್ಷೆಯಲ್ಲ; ಅಂತಃಶಕ್ತಿಪ್ರಪಂಚಗಳ ಉಪೇಕ್ಷೆಯಲ್ಲ. ಇವೆಲ್ಲವುಗಳ ವಿಕಾಸಾತ್ಮಕ ಶಿಕ್ಷೆಯದು. ಲೋಕಸಂಗ್ರಹದ ಸರ್ವಾಂಗ ಸುಂದರ ದೀಕ್ಷೆಯದು.

**ಲೋಕಾಸ್ಸಮಸ್ತಾಃ ಸುಖಿನೋ ಭವಂತು !**

**-: ಸಂಪೂರ್ಣ :-**

## ಪರಿಶಿಷ್ಟ ೧

(ಇಂದಿನ ವರೆಗೆ ಹಣಕೊಟ್ಟ ಮತ್ತು ಕೊಡಲೊಪ್ಪಿದ ಜನರ ಹೆಸರುಗಳು)

### ಆಶ್ರಯದಾತರು

| | | |
|---|---|---|
| ಶ್ರೀ | ಗುರುರಾವ ಬೇವೂರ ಆಯ್. ಸಿ. ಎಸ್. ಪೋಸ್ಟ ಮಾಸ್ತರ ಜನರಲ್ ಮುಂಬಯಿ ಇಲಾಖೆ | ೨೦೦ |
| ,, | ನಾರಾಯಣರಾವ ಲೋಕೂರ ಬಿ. ಎ. ಎಲೆಲ್. ಬಿ. ಡಿಸ್ಟ್ರಿಕ್ಟ ಜಡ್ಜ ಅಹಮ್ಮದಾಬಾದ | ೨೦೦ |
| ,, | ನಾರಾಯಣರಾವ ಜೋಸಿ ಬಿ. ಎ. ಎಲೆಲ್ ಬಿ. ವಕೀಲ ಬೆಳಗಾವಿ | ೨೦೦ |
| ,, | ಯಳಂದೂರ ರಾಮಚಂದ್ರರಾವ ಬಿ.ಎ. ಎಲ್.ಸಿ.ಇ ಚೀಫ ಇಂಜನಿಯರ ಮೈಸೂರ ರೇಲ್ವೆ ಮೈಸೂರು | ೨೦೦ |
| ,, | ಎಚ್. ರುಕ್ಮಣಿಯಮ್ಮಾ ಬೆಂಗಳೂರ | ೨೦೦ |
| ,, | ರುಕ್ಮಾಂಗದರಾವ ದೇಶಪಾಂಡೆ ಎಂ. ಎ. ಇನ್ ಕಮ್ ಟ್ಯಾಕ್ಸ ಆಫೀಸರ ಧಾರವಾಡ | ೨೦೦ |
| ಡಾ. | ರಂಗರಾವ ಅಸುಂಡಿ MSC. PH. D. ಪ್ರೊಫೆಸರ ಅಲಿಗಡ ಕಾಲೇಜ ಅಲಿಗಡ | ೨೦೦ |
| ಶ್ರೀ | ಗುರುರಾವ ವಾಳವೇಕರ ಬಿ. ಎ ಎಲೆಲ್ ಬಿ. ಹುಬ್ಬಳ್ಳಿ | ೨೦೦ |
| ,, | ರಂಗರಾವ ಮನಸೂರ ಬಿ. ಎ. ಧಾರವಾಡ | ೨೦೦ |
| ,, | ಪಂಡಿತ ತಾರಾನಾಥರಾಯರು ತುಂಗಭದ್ರಾ | ೧೫೦ |
| ,, | ವಿಶ್ವನಾಥರಾವ ಜೋಗ ಬಿ. ಎ. ಎಲೆಲ್ ಬಿ. ಎಂ. ಎಲ್. ಸಿ. ಧಾರವಾಡ | ೧೦೦ |
| ,, | ಮಧ್ವರಾವ ಕಬ್ಬೂರ ಎಂ. ಎ. ಎಲೆಲ್ ಬಿ. ಧಾರವಾಡ | ೧೦೦ |
| ,, | ವೆಂಕಟರಾವ ಮುದವೇಡಕರ ಧಾರವಾಡ | ೧೦೦ |

# ಪೋಷಕರು.

ಶ್ರೀ. ಜಿ. ಎಚ್. ಗುಗ್ಗಳಿ ಆಯ್. ಸಿ. ಎಸ್. ಆಡಿಶನಲ್ ಸೆಶನ್ ಜಡ್ಜ — ಬೆಳಗಾವಿ
ದಿವಾಣಬಹಾದ್ದೂರ ಎ. ಬಿ. ಲಠ್ಠೆ ಎಂ. ಎ. ಎಲೆಲ್, ಬಿ. — ,,
ರಾವಬಹಾದ್ದೂರ ಎಸ್. ಎನ್. ಅಂಗಡಿ ಬಿ. ಎ. ಎಲೆಲ್. ಬಿ. ಎಂ. ಎಲ್. ಸಿ. — ,,
ರಾವಸಾಹೇಬ ಭೀಮರಡ್ಡಿ ಕುರ್ತಕೋಟಿ ಬಿ. ಎ. ಅಸಿಸ್ಟಂಟ ಕಮೀಶನರ. — ,,
ಶ್ರೀ. ಎಂ. ಭಾಗವತ ಬಿ. ಎ. ಅಸಿಸ್ಟಂಟ ರಜಿಸ್ಟ್ರಾರ ಕೋಆಪರೇಟಿವ್ಹ ಸೊಸಾಯಿಟಿ. — ,,
ರಾವಬಹಾದ್ದೂರ ಎಂ. ವೆಂಕಟ ನಾರಾಯಣಪ್ಪ ಬಿ. ಎ. ಸುಪರಿಂಟೆಂಡೆಂಟ ಆಯರ್ನ ವರ್ಕ್ಸ — ಭದ್ರಾವತಿ
ಶ್ರೀ. ಭಾರತೀಬಾಯಿ ಜಿ. ಸಿಂಹ — ಜೇಮಶೇಟಪುರ
ಡಾ. ಯಶವಂತರಾವ ನಾಡಗೇರ M. S. F. C. P. S. — ಧಾರವಾಡ
ರಾವಬಹದ್ದೂರ ಶ್ರೀನಿವಾಸರಾವ ಕೊಯಿಮತ್ತೂರ — ,,
ಪ್ರೊಫೆಸರ ಪತ್ರಾವಳಿ ಎಂ. ಎ. — ,,
,, ಕೆ. ಜಿ. ಕುಂದಣಗಾರ ಎಂ. ಎ. — ಕೊಲ್ಹಾಪುರ
,, ತಿರುಮಲರಾವ ಪಾಟೀಲ ಎಂ. ಎ. — ಧಾರವಾಡ
,, ರಂಗಾಚಾರ್ಯ ಜಹಾಗೀರದಾರ ಎಂ. ಎ. — ,,
ಶ್ರೀ. ಕೆ. ಆರ್. ಆಚಾರ್ಯ ಎಂ. ಎ. ಎಲ್. ಬಿ. — ಮಂಗಳೂರು
ಶ್ರೀ. ವ್ಹಿ. ಎನ್. ಅಡವಿ ಬಿ. ಎ. — ಕರಾಚಿ
ಶ್ರೀಮನ್ನಿರಂಜನ ನಿರಾಭಾರಿ ದೇಶಿಕೇಂದ್ರ
ಶ್ರೀ. ಶಾಂತವೀರಸ್ವಾಮಿಗಳು ಸಂಸ್ಥಾನ — ಗುರುಮಠಕಲ್ಲ
ಶ್ರೀ. ವ್ಹಿ. ವ್ಹಿ. ಆಲಬಾಲ ಬಿ. ಎ. ಎ. ಎಲೆಲ್. ಬಿ. — ವಿಜಾಪೂರ
ಶ್ರೀ. ವೆಂಕಟೇಶ ದತ್ತಾತ್ರಯ ಬೆಳವಿ ಬಿ. ಎ. ಎಲೆಲ್. ಬಿ. — ಬೆಳಗಾವಿ

ಶ್ರೀ. ವಿಠ್ಠಲರಾವ ಜಮುಖಂಡಿ ಎಂ. ಎ. ಎಲೆಲ್ ಬಿ. ಧಾರವಾಡ
ಶ್ರೀ. ಲಕ್ಷ್ಮಣರಾವ ದುರ್ಗ B. A. LL. B. ,,
ಶ್ರೀ. ಎಚ್. ಪಿ. ಸೂರ್ಯವಂಶಿ B. A. LL. B.
ಸಬ್ಬಜಜ್ಜ ಹುಬ್ಬಳ್ಳಿ
ಶ್ರೀ. ಪಿ. ಎಚ್. ಗುಂಜಾಳ ,, ,, ಚಿಕ್ಕೋಡಿ
ರಾವಬಹಾದ್ದೂರ ಎಂ. ಶ್ಯಾಮರಾವ ರಿಟಾಯರ್ಡ
ಡಾಯರೆಕ್ಟರ ಆಫ್ ಎಜ್ಯುಕೇಶನ ಬೆಂಗಳೂರ
ಶ್ರೀ. ಎಚ್. ರಂಗಾಚಾರ್ಯ M. A. ,,
ಶ್ರೀ. ಆರ್. ಕಲ್ಯಾಣಮ್ಮಾ 'ಸರಸ್ವತಿ' ಸಂಪಾದಕ ,,
ಶ್ರೀ. ಎಚ್. ಎನ್. ಗೋವಿಂದರಾವ ಬಿ. ಎ. ಸುಪರಿಂ
ಟೆಂಡೆಂಟ ಸೆ. ಕಲ್ಚರ ಮೈಸೂರ
ಶ್ರೀ. ಎಂ. ಎಚ್. ಕರೀಕಟ್ಟಿ ಬಿ. ಎ. ಬೆಳಗಾವಿ
ಶ್ರೀ. ಬಸೆಟ್ಟೆಪ್ಪಾ ದೊಡ್ಡಬಸಪ್ಪಾ ತಟ್ಟೆ ಸಾವಕಾರ ಲಕ್ಷ್ಮೇಶ್ವರ
ಶ್ರೀ. ನರಸಿಂಗರಾವ ಉರ್ಫ ಅಪ್ಪಣ್ಣಾ ದೇಸಾಯಿ ಕಲ್ಲಾಪೂರ
ಶ್ರೀ. ಮಲ್ಲಪ್ಪಾನಾಯಿಕ ತಟ್ಟೆ ಆಲೂರ
ಶ್ರೀ. ಕೃಷ್ಟಪ್ಪಾ ನಾಯಿಕ ಸಾವಕಾರ ಮುಳಗುಂದ
ಶ್ರೀ. ಗೋವಿಂದರಾವ ಕುಲಕರ್ಣಿ ವಕೀಲ ಬೈಲಹೊಂಗಲ
ಶ್ರೀ. ಜಿ. ಎಸ್. ಹುರಳಿ ಸಂಪಾದಕ ಕರ್ನಾಟಕ ಟಾ. ಧಾರವಾಡ
ಶ್ರೀಮಂತ ಗುರಪ್ಪಾ ದೇಸಾಯಿ ಬಿಸರಳ್ಳಿ
ಶ್ರೀ. ರಾಘವೆಂದ್ರರಾವ ಚಾಕಲಬ್ಬಿ ಕೊಪ್ಪಳ
ಶ್ರೀ. ಸುಬ್ರಹ್ಮಣ್ಯಶಾಸ್ತ್ರಿ ಕರ್‍ರಾ ಹೊಸಪೇಟೆ
ಶ್ರೀ. ದತ್ತೋಪಂತ ಹಣಬರಟ್ಟೆ ಬೈಲಹೊಂಗಲ
ಶ್ರೀ. ರಾಘವೇಂದ್ರರಾವ ಗಿಡದಹುಬ್ಬಳ್ಳಿ ,,
ಶ್ರೀ. ರುದ್ರಪ್ಪಾ ಸಿಂಣೂರ ಯಾದಗಿರಿ
ಶ್ರೀ. ಶ್ರೀನಿವಾಸರಾವ ಕೊಪ್ಪ ಬಿ. ಎ. ವಕೀಲ ಧಾರವಾಡ
ಶ್ರೀ. ಸಂಪಾದಕರು ವಿಜಯ ,,

## ಚಂದಾದಾರರು

ಶ್ರೀ. ಬಿ. ಅನಂತರಾವ ಬಿ. ಎ.
ಬಿ. ಎಲ್ ಮದನಪಲ್ಲಿ
ರಾವಬಹಾದ್ದೂರ ಬಿ. ರಾಮರಾವ
ಎಂ. ಎ. ಎಲೆಲ್ ಬಿ. ಮದ್ರಾಸ
ಶ್ರೀ. ಆರ್. ಎಸ್. ಪಂಚಮುಖಿ
ಎಂ. ಎ. ಮದ್ರಾಸ
,, ಪಿ. ಕೆ. ಎಸ್. ರಾವ್,
ಬ್ರಹ್ಮದೇಶ
,, ಎಚ್. ಶ್ರೀನಿವಾಸರಾವ
ಲಕ್ಷ್ಮೀನಿವಾಸ ಹಿಂದೂಹಾ
ಟೀಲ ಮುಂಬಯಿ
,, ಎಂ. ಶ್ರೀನಿವಾಸರಾವ ಸಾಲಿ
ಸಿಟರ್ಸ್ರ ಫರ್ಮ ಮುಂಬಯಿ
,, ಕಂಪ್ಲಿ ಶಂಕರಪ್ಪನವರು
ಆದವಾನಿ
,, ಬಿ. ಎನ್. ಶ್ರೀನಿವಾಸಯ್ಯ
ಆಗ್ರಾ
,, ಬಿ. ಎಂ. ರೇವಣಸಿದ್ದಯ್ಯಾ
ಅನಂತಪುರ
,, ಪಂಪಯ್ಯಾ ,,
,, ವೀರಭದ್ರಪ್ಪಾ ಎಲಿಗಾರ
ಅನಂತಪುರ
,, ಕೆ. ಚನ್ನಬಸಪ್ಪಾ ,,
,, ಟಿ. ವಿರುಪಾಕ್ಷಯ್ಯಾ ,,
,, ಎಂ. ಚೆನ್ನಬಸಯ್ಯಾ ,,

ಶ್ರೀ. ಎಸ್. ಎನ್. ಶಿವರಾವ
ಬಿ. ಇ. ಹೈದ್ರಾಬಾದ
,, ಶ್ರೀನಿವಾಸಾಚಾರ್ಯ ಜಹ
ಗಿರದಾರ ತಾಂಡೂರ
,, ಕೆ. ಶಿವಬಸಪ್ಪಾ ಶೆಡಂ
,, ಗುರಾಚಾರ ಸುರಪುರ
,, ಅವಧೂತರಾವ ,,
,, ಆರ್. ಗುಂಡಪ್ಪಾ ಬಿ. ಎ.
ಸುರಪುರ
,, ಶ್ರೀನಿವಾಸರಾವ ಬಿ. ಎ.
ಎಲೆಲ್ ಬಿ. ಮಂಥಣಿ
,, ಬಸವಂತರಾವ ಮಣಗಾಂವಿ
ಕಲಬುರ್ಗಿ
,, ವೀರಶೈವ ಲಾಯಬ್ರರಿ ,,
,, ಎಸ್. ಕೆ. ಅಯ್ಯಂಗಾರ
ಕಲಬುರ್ಗಿ
,; ಅಶ್ವತ್ಥರಾವ ಬಿ. ಎ. ಬಿ.
ಎಲ್. ಕಲಬುರ್ಗಿ
,, ಜನಾರ್ದನರಾವ ದೇಸಾಯಿ
ಕಲಬುರ್ಗಿ
,, ಕಕ್ಕೇರಿ ಹಣಮಂತರಾವ
ಕಲಬುರ್ಗಿ
,, ರಾಜೇಂದ್ರರಾವ ,,
ರಾಜಾರಾಮ ಕಾಲೇಜ
ಕೊಲ್ಹಾಪುರ
,, ಶಂಕರಗೌಡಾ ಪಾಟೀಲ
ಸಾಂವಶಿ

ಶ್ರೀ. ನೇಟಿವ್ಹ ಜನರಲ ಲಾಯ
ಬ್ರರಿ ಬನಹಟ್ಟಿ
ಪ್ರೊ. ರಾಮರಾವ ಕುಲಕರ್ಣಿ
ಎಂ. ಎ. ವುಯಿಲಿಂಗಡನ್
ಕಾಲೇಜ
,, ವ್ಹಿ. ಎಚ್. ನಾಗರಹಳ್ಳಿ ಬಿ.
ಎ. ವುಯಿಲಿಂಗಡನ್ ಕಾಲೇಜ
ಪ್ರೊ. ಎಸ್. ಎಸ್. ಭಟ ಆಗ್ರಿ
ಕಲ್ಚರಲ್ ಕಾಲೇಜ ಪುಣೆ
ಡಾ. ಎಂ. ಎಚ್. ಕೃಷ್ಣ ಅಯ್ಯಂ
ಗಾರ ಎಂ.ಎ. ಪಿ. ಎಚ್. ಡಿ
ಶ್ರೀ. ಆರ್. ರಾಮರಾವ ಆ. ಡಾ
ಯರೆಕ್ಟರ ಆರ್ಕಯಾಲಜಿ
ಮೈಸೂರ
,, ದತ್ತಶರ್ಮ ಎಂ. ಎ.
ಪ್ಯಾಲೇಶ ಮೈಸೂರ
ಪ್ರೊ. ಬಿ. ತಿರುಮಲಾಚಾರ್ಯ
ಎಂ. ಎ ಮೈಸೂರ
,, ಬಿ. ಆರ್. ಸುಬ್ಬರಾವ ಎಂ.
ಎ. ಮೈಸೂರ
,, ಎಚ್ ನಾಗೇಶರಾವ ಎಂ. ಎ
ಮೈಸೂರ
,, ಎಸ್. ಆರ್ ನಾರಾಯಣರಾ
ವ ಎಂ. ಎ. ಮೈಸೂರ
,, ಎಂ. ಎ. ವೆಂಕಟರಾವ
ಎಂ. ಎ. ಮೈಸೂರ

ಶ್ರೀ. ಅನಂತಯ್ಯ ಎಂ. ಎ.
ಮೈಸೂರ
,, ಎಚ್. ಕೃಷ್ಣರಾವ ಎಂ. ಎ
ಮೈಸೂರ
,, ಶ್ರೀ ರಂಗಾಚಾರ್ಯ ಎಂ. ಎ
ಮೈಸೂರ
,, ಎಸ್. ಹನುಮಂತಾಚಾರ್ಯ
ಎಂ. ಎ ಮೈಸೂರ
,, ಚಂದ್ರಶೇಖರಶಾಸ್ತ್ರ ಎಂ. ಎ
ಮೈಸೂರ
,, ಎ. ಎನ್ ಮೂರ್ತಿರಾವ ಎಂ
ಎ. ಮೈಸೂರ
,, ಎಚ್ ಎನ್ ರಾಘವೇಂದ್ರಾ
ಚಾರ್ಯ ಎಂ. ಎ. ಮೈಸೂರ
,, ಶ್ರೀರಾಮಗುರು ಸೇವಾ
ಸಮಿತಿ ಎಡತೊಡೆ
,, ಎಲ್. ಗುಂಡಪ್ಪ ಎಂ. ಎ.
ಬೆಂಗಳೂರ
,, ಎನ್. ವೆಂಕಟೇಶ ಅಯ್ಯಂ
ಗಾರ ಬಿ. ಎ. ಬೆಂಗಳೂರ
ಡಾ. ಎಂ. ಸಿ. ತುಮ್ಮಿನಕಟ್ಟಿ M. A
PH D ಬೆಂಗಳೂರ
,, ಸಿ. ಕೆ. ವೆಂಕಟರಾಮಯ್ಯ
ಎಮ. ಎ. ಬೆಂಗಳೂರ
,, ಪಬ್ಲಿಕ ಲಾಯಬ್ರರಿ ಬೆಂಗ
ಳೂರ

ಶ್ರೀ. ಸಿ. ಕೃಷ್ಣಸ್ವಾಮಿರಾವ ಬಿ. ಎ. ಹಾಸನ
,, ರೀಡಿಂಗ ರೂಮು ಹಾಸನ
,, ಸಿ. ಪಿ. ಸಿ. ಮೋಟಾರ ಸರ್ವ್ಹಿಸ ಹಾಸನ
,, ಎಸ್. ವೆಂಕಟೇಶಯ್ಯ ಹಾಸನ
,, ಎ. ಬಿ. ರಾಮಚಂದ್ರರಾವ ಬಿ. ಎ. ಎಲೆಲ್ ಬಿ ಹಾಸನ
,, ಆಂಬುಗಂ ಆಯ್ಯಂಗಾರ ಬಿ. ಎ. ಎಲೆಲ್ ಬಿ. ಹಾಸನ
,, ಎಸ್. ಎಸ್. ನಾರಾಯಣ ರಾವ ಬಿ. ಎ. ಎಲೆಲ್ ಬಿ. ಹಾಸನ
,, ಸಿ. ಸೂರ್ಯನಾರಾಯಣರಾವ ಬಿ. ಎ. ಎಲೆಲ್ ಬಿ. ಹಾಸನ
,, ಟಿ. ಶ್ರಿನಿವಾಸಾಚಾರ್ಯ ಬಿ. ಎ. ಎಲೆಲ್. ಬಿ. ಹಾಸನ
,, ಶ್ರೀ. ಕ. ಶ್ರೀಕಂಠಯ್ಯಾ ಬಿ ಎ. ಹಾಸನ
,, ಬೆಳವಡಿ ಸೂರ್ಯನಾರಾಯಣರಾವ ಬಿ. ಎ. ಹಾಸನ
,, ಕೆ. ಶ್ರೀನಿವಾಸಾಚಾರ್ಯ ಬಿ. ಎ. ಪೋಸ್ಟಮಾಸ್ತರ ಸಾಗರ

ಶ್ರೀ. ಕಾಫಿ ಪ್ಲಾಂಟರ ಗುರವೇಗೌಡರ ಮಕ್ಕಳು ಬಿ. ಶಾಂತಮಲ್ಲೇಶಗೌಡರು ಬಾಳ್ಳುಪೇಟ
,, ಆರ್. ಆರ್. ಸ್ವಾಮಿ ಹಿರೆಮುಲ್ಲೂರ
,, ಎಚ್. ಎಸ್. ಶ್ರೀಕಂಠಯ್ಯ ಗುರುನಿಕೇತನ ಕಡೂರ
,, ಬಿ. ಸಿ. ನೀರುಬಸಣ್ಣ ಕೋನಸಾಗರ
,, ಮಹಿಳಾ ವಾಚನಾಲಯ ಬಳ್ಳಾರಿ
,, ಎಂ. ಎಂ. ಭಟ್ಟ ಎಂ. ಎ. ಬಿ. ಎಲ್. ಹೊಸಪೇಟೆ
,, ಸೆಂಟ್ರಲ್ ಹಾಯಸ್ಕೂಲ ಮಡಿಕೇರಿ
,, ಎಸ್. ಶ್ರೀನಿವಾಸಯ್ಯ ಭಾಗಮಂಡಲ
,, ಎಸ್ ಬಸಪ್ಪ ಕಾಫಿ ಪ್ಲಾಂಟರ ಪುನ್ನಯ್ಯಾ ಇಸ್ಟೇಟ
,, ಬೈಲೂರ ನಾರಾಯಣಪ್ಪ ಚೊಕ್ಕಾಡಿ
,, ಕೆ. ಕೃಷ್ಣ ಕುಲಾಯಿ ಕುಲಾಯಿ
,, ಕೆ. ವಾಸುದೇವ ಕಲ್ಕೂರ ಶಾಂತಿನಿಕೇತನ ಕೂರಾಡಿ

ಶ್ರೀ. ವಾಯ್ ನಂಜ್ಯಪ್ಪಾ
ಎಣ್ಣೆಗುಡ್ಡೆ
,, ಕೆ. ರಾಮಯ್ಯ ಶೆಟ್ಟಿ
ಉದಯಾವರ
ಪೀಪಲ್ಸ ಲಾಯಬ್ರರಿ ಉಡುಪಿ
ಟಿ. ಮಂಗೇಶರಾವ ಬಿ. ಎ.
ಎಲ್‌ಲ್ ಬಿ. ಗವ್ಹರ್ಮೆಂಟ
ಕಾಲೇಜ ಮಂಗಳೂರ
ಎಂ. ಎನ್. ಮುದಭಟಕಲ್ಲ
ಅಂಕೋಲಾ
ಶ್ರೀಧರ ಈಶ್ವರ ಹೇಗಡೆ ಕೂಜಳ್ಳಿ
ಆನಂದಾಶ್ರಮ ಲಾಯಬ್ರರಿ
ಶಿರಾಳಿ
ಎಂ. ಎಸ್ ಹೇಗಡೆ ಎಂ. ಎ.
ಎಲೆಲ್. ಬಿ. ಹೊನ್ನಾವರ
ಕೆ. ಎನ್. ಮಾಸ್ಕೆರಿ ಸಿರಸಿ
ಸರಸ್ವತಿ ಧರ್ಮಾರ್ಥ ವಾಚನಾ
ಲಯ ಸಿರಸಿ
ಹೆಡಮಾಸ್ತರ ಮಿಡಲಸ್ಕೂಲ
ಬೆಂಗಳೂರ
ಎಂ. ವರವಣಿ ರಾಜೇರಾವ
ಬೆಂಗಳೂರ
ಆರ್. ಎಸ್. ಪದಕಿ ಅಲ್ಲಾಬಾದ
ಮಿಡಲಸ್ಕೂಲ ಶ್ರೀರಾಮಪುರ
ಎನ್. ಬಿ. ಚಂದ್ರಶೇಖರ
ಶ್ರೀರಂಗಪಟ್ಟಣ

ಶ್ರೀ. ಸಿದ್ಧಬಸಪ್ಪಾ ಗಿಡ್ನವರ
ಬಾಗಲಕೋಟಿ
,, ಅಂಬರೀಷ ವಾಚನಾಲಯ
ಅಮಲಝರಿ
,, ತ್ರಿಂಬಕರಾವ ಕುಲಕರ್ಣಿ
ಬಿ. ಎ ಎಲೆಲ್ ಬಿ.
ಬೈಲಹೊಂಗಲ
,, ಪಿ. ಬಿ. ಉಗರಗೋಳ ಬಿ.ಎ
ಎಲೆಲ್ ಬಿ. ಬೈಲಹೊಂಗಲ
,, ಶಿವಮೂರ್ತಿಸ್ವಾಮಿ ಕಣಬರ
ಗಿಮಠ ಬಿ. ಎ. ಎಲೆಲ್ ಬಿ
ಬೈಲಹೊಂಗಲ
,, ಕೆ. ಬಿ. ಇನಾಂದಾರ ಬಿ. ಎ
ಎಲೆಲ್ ಬಿ. ಬೈಲಹೊಂಗಲ
,, ಗೋಪಾಳರಾವ ಮಂಗಳವೇ
ಡೇಕರ ಬಿ. ಎ. ಎಲೆಲ್ ಬಿ
ಬೈಲಹೊಂಗಲ
,, ಭಾವೆಪ್ಪಾ ಮೂಗಿ
ಬೈಲಹೊಂಗಲ
,, ಎಸ್. ಆರ್ ಕುಲಕರ್ಣಿ ಬಿ.
ಎ. ಎಲೆಲ್. ಬಿ.
ಬೈಲಹೊಂಗಲ
,, ತಮ್ಮಣ್ಣಾ ಬೆಲವಾಡ
ಬೈಲಹೊಂಗಲ
,, ಚಿನ್ನಪ್ಪಾ ಇಂಚಲಿ ಬಿ. ಎ.
ಎಲೆಲ್ ಬಿ. ಬೈಲಹೊಂಗಲ

ಶ್ರೀ. ಭೀಮರಾವ ಕುಲಕರ್ಣಿ
ಬೈಲಹೊಂಗಲ
,, ಶಿವನಾಯಿಕ ಸಿ. ಪಾಟೀಲ
ಬಿ. ಎ. ಎಲೆಲ್ ಬಿ.
ಬೈಲಹೊಂಗಲ
,, ಎಸ್ ಎಂ. ಮಾಳಿ ಬಿ. ಎ.
ಎಲೆಲ್ ಬಿ. ಬೈಲಹೊಂಗಲ
,, ಡಿ. ಎಂ. ಕುಲಕರ್ಣಿ ಬಿ. ಎ
ಎಲೆಲ್ ಬಿ. ಬೈಲಹೊಂಗಲ
,, ಅಣ್ಣಪ್ಪಾ ಮೆಟಿಗುಡ್ಡ
ಬೈಲಹೊಂಗಲ
,, ರಾಮರಾವ ಕರ್ಜಗಿ
ಬೈಲಹೊಂಗಲ
,, ಎಸ್. ಎಸ್. ಬಸವನಾಳ
ಎಂ. ಎ ಲಿಂಗಾಯತ
ಹಾಯಸ್ಕೂಲ ಧಾರವಾಡ
,, ವೆಂಕಟರಾವ ಎನ್. ಕುಲ
ಕರ್ಣಿ ಧಾರವಾಡ
,, ಕೆ ವ್ಹಿ. ಕುಲಕರ್ಣಿ ಎಂ. ಎ.
ಧಾರವಾಡ
,, ರಾಘವೇಂದ್ರರಾವ ಮುತಾ
ಲೀಕದೇಸಾಯಿ ಬಿ. ಎ.ಜಿ.
ಧಾರವಾಡ
ಎಚ್ ಬಿ ಉಮಡಿ ಎಂ. ಎ.
ಧಾರವಾಡ
ಎಸ್. ಎಸ್. ಸಿಂಧೆ ,,

ಶ್ರೀ. ವೆಂಕಟರಮಣಾಚಾರ್ಯ
ಶಿರಹಟ್ಟಿ ಧಾರವಾಡ
,, ರಾಮಾಚಾರ್ಯ ಏರಿ ,,
ಪೀಪಲ್ಸ ಲಾಯಬ್ರರಿ ,,
ಡಾ. ಕಾಂತರಾವ ಕಮಲಾಪೂರ
ಎಂ. ಬಿ. ಬಿ. ಎಸ್
ಧಾರವಾಡ
ಕರ್ನಾಟಕ ಕಾಲೇಜ ,,
,, ಶ್ರೀಮಂತ ರಘುನಾಥರಾವ
ಜಹಾಗೀರದಾರ ಧಾರವಾಡ
,, ಬಸಪ್ಪಾ ದಾನಪ್ಪಾ ಬಾಳಿ
ಧಾರವಾಡ
,, ಶಿವಾನಂದಸೂನು ಹುಬ್ಬಳ್ಳಿ
,, ಸಿದ್ಧರಾಮಪ್ಪಾ ಪಾವಟೆ
ಹುಬ್ಬಳ್ಳಿ
,, ಸರಸ್ವತಿ ವಿದ್ಯಾರಣ್ಯ ವಾಚ
ನಾಲಯ ಹುಬ್ಬಳ್ಳಿ
,, ರಂಗರಾವ ಲಕ್ಕುಂಡಿ ಬಿ. ಎ.
ಹುಬ್ಬಳ್ಳಿ
,, ಕಳಕಪ್ಪ ಗೋಲಪ್ಪನವರ
ಹುಲಕೋಟಿ
,, ಗೋಪಾಳರಾವ ನವಲಿ
ಗದಗ
,, ಗಿರಿಯಪ್ಪಗೌಡಾ ಪಾಟೀಲ
ಹಾಳಕೇರಿ
,, ವಿದ್ಯಾವರ್ಧಕ ವಾಚನಾ
ಲಯ ನರೇಗಲ್ಲ

ಶ್ರೀ. ವಿರುಪಾಕ್ಷಪ್ಪಾ ಅಳವಂಡಿ
ಹೊಳೆಆಲೂರ
,, ಚನ್ನಮಲ್ಲಯ್ಯಾ ಕಂಬೀ
ಮಠ ಅಣ್ಣಿಗೇರಿ
,, ಎ. ಆರ್. ಸವಣೂರ
ಹಾವೇರಿ
,, ಕೃ. ಗು. ತಿಮ್ಮಾಪೂರ
ದೇವೀಹೊಸೂರ
,, ಎಲ್. ಬಿ. ಜಿಗಳಿ
ಕುಪ್ಪೇಲೂರ
,, ಭೀಮಾಚಾರ್ಯ ವಡವಿ
ಕುಪ್ಪೇಲೂರ
,, ಪ್ರಲ್ಹಾದರಾವ ರಿತ್ತಿ
ಸವಣೂರ
,, ಅಶ್ವತ್ಥರಾವ ಮಹಿಷಿ
ಶಿರಹಟ್ಟಿ
,, ರಾಮರಾವ ಮಂಗಸೂಳಿ
ಶಿರಹಟ್ಟಿ
,, ಕಟ್ಟೀಮನಿ ಮಾಸ್ತರ
ಬಾಗಲಕೋಟ
,, ಎಮ್. ಬಿ. ಟಿ.
ಕೋಲಾರ ಗೋಲ್ಡ ಫೀಲ್ಡ್ಸ
,, ಥಂಡಿ ವೆಂಕಟಸುಬ್ಬಯ್ಯ
ಚಿಟ್ಟಿ ಬೆಂಗಳೂರ
. ಎಂ. ವಿ. ದೊರೆಸ್ವಾಮಿ
ಅಯ್ಯಂಗಾರ ಮೈಸೂರ

ಶ್ರೀ ವ್ಹಿ. ಜಿ. ಪರ್ವತಿಕರ ಬಿ. ಎ.
ಎಲೆಲ್. ಬಿ ಬಾಗಲಕೋಟೆ
,, ವ್ಹಿ. ಎ. ಮುಂಡಿ ಬಿ. ಎ.
ಎಲೆಲ್. ಬಿ. ಮುದ್ದೇಬಿಹಾಳ
,, ನೆಟಿವ್ಹ ಜನರಲ್ ಲಾಯ
ಬ್ರರಿ ಮುದ್ದೇಬಿಹಾಳ
,, ಮಡಿವಾಳಪ್ಪಾ ಸಾಸನೂರ
ಕಲಕೇರಿ
,, ಅಪ್ಪಾಜಿ ನಾರಾಯಣ ಕುಲ
ಕರ್ಣಿ ಕಲಕೇರಿ
,, ಸಿಂಪಿಲಿಂಗಪ್ಪಾ ಇಂಗಳಹಳ್ಳಿ
,, ಎಸ್. ಎಸ್. ಸಕ್ರಿ ಬಿ. ಎ.
ಇಲಕಲ್ಲ
" ಬಿ ಜಿ. ಸಕ್ರಿ ,,
,, ಜಿ. ಎಲ್. ಕನಬೂರ ಬಿ. ಎ
ಎಲೆಲ್ ಬಿ ಬಾಗಲಕೋಟ
,, ಗವ್ಹರ್ಮೆಂಟ ಹಾಯಸ್ಕೂಲ
ಬೆಳಗಾವಿ
,, ವೀರಪ್ಪಾ ಸಿದ್ಧಲಿಂಗಪ್ಪಾ
ವಿರುಪಾಕ್ಷಿ ಬೆಳಗಾವಿ
,, ಶಿವರುದ್ರಪ್ಪಾ ಅಡ್ಡಣಗಿ ಬಿ
ಎ. ಎಲೆಲ್. ಬಿ ಬೆಳಗಾವಿ
,, ಭೀಮಾಜಿ ಶಂಕರ ಬೆಟಗೇರಿ
ಬೆಳಗಾವಿ
,, ಆಲದಮರ, ಸುಪರವ್ಹಾಯಿ
ಜರ ಡಿ. ಎಲ್. ಬಿ ಬೆಳಗಾವಿ

ಶ್ರೀ ಕೆ. ಎಸ್ ಪಾಟೀಲ ಬಿ. ಎ.
ಎಲೆಲ್ ಬಿ. ಬೆಳಗಾವಿ
,, ಬಿ. ಬಿ. ಮಮದಾಪುರ ಬಿ-
ಎ. ಬೆಳಗಾವಿ
,, ಬಿ. ಎ. ನೀರಡಿ ಬಿ. ಎ.
ಬೆಳಗಾವಿ
,, ಎಲ್. ವಾಯ್. ತೋರಣ್ಣ
ವರ ಬಿ. ಸಿ ಬೆಳಗಾವಿ
,, ಎಸ್. ಎ. ಎಲಿಗಾರ
ಬೆಳಗಾವಿ
,, ಜಿ. ಎಂ. ಪಾಟೀಲ ,,
,, ಸಿ. ಸಿ ರಡ್ಡಿ ಬಿ. ಎ
ಬೆಳಗಾವಿ
,, ಜಿ. ಜಿ. ಹುಲಕುಂದ ಬಿ. ಎ
ಎಲೆಲ್. ಬಿ. ಅಥಣಿ
,, ಕೆ. ಜಿ. ವರ್ಟೆ ಎಂ. ಎ.
ಎಲ್. ಟಿ. ಅಥಣಿ
,, ಅಡ್ಯಾರ ಲಾಯಬ್ರರಿ
ಮದ್ರಾಸ
,, ಏಂ. ರಾಮರಾವ ಕಾಫಿ
ಪ್ಲಾಂಟರ ಕಳಸಾಪೂರ
,, ಆರ್. ಆರ್. ತಾವರಗೇರಿ
ಎಲ್. ಸಿ. ಪಿ. ಏಸ್.
ಮುಂಬಯಿ
,, ಶ್ರೀನಿವಾಸ ಜೊಯಿಸ
ಕಲ್ಲೂರ ಚಿತ್ರದುರ್ಗ

ಶ್ರೀ ಬಿ. ಕೆ. ನಾರಾಯಣರಾವ
ಬೆಂಗಳೂರ
,, ಡಾ. ಸಿ. ಬಿ. ರಾಮರಾವ
ಬೆಂಗಳೂರ
,, ಸೌ. ಸರಸ್ವತೀಬಾಯಿ
ಹುಕ್ಕೇರಿ ಬೆಂಗಳೂರ
ಡಾ. ಬಿ. ಜಿ. ದೇಶಪಾಂಡೆ ಏಂ.
ಬಿ. ಬಿ. ಏಸ್. ಧಾರವಾಡ
,, ಕಲ್ಲಪ್ಪಾ ಅಂಗಡಿ ,,
,, ಗೋವಿಂದರಾವ ಲಕ್ಷ್ಮಣರಾ
ವ ಬುರ್ಲಿ ಧಾರವಾಡ
ಏಸ್. ರಾಮಯ್ಯರಡ್ಡಿ
ಸಕಳವಾಡ
ಹುಲ್ಲಿಹಳ್ಳಿ ಶ್ಯಾನಭೋಗ ಶೀ
ನಪ್ಪನವರು ಹುಲ್ಲಹಳ್ಳಿ
ಕೆ. ಪಿ. ರಾಮಯ್ಯ ಜಮೀನ
ದಾರ ಕೊಪ್ಪ
ಶಂಕರರಾಯರು ಫಾರೆಸ್ಟರು
ಕೊಪ್ಪ
ಹೊನ್ನೆ ಗಂಗಪ್ಪನವರು
ಜಿಗಣಿ
ಹೂವಿನಮನಿ ಶಾಮಪ್ಪನವರು
ಆನೇಕಲ್ಲ
ತಿಮ್ಮಾಜಿ ಲಿಂಗೋ ಕುಲ
ಕರ್ಣಿ ಕಾಲವಾಡ
ಕೇಶವರಾವ ಛಬ್ಬಿ ಶಿಗ್ಗಾವಿ

---

# ನವಜೀವನ ಗ್ರಂಥಭಾಂಡಾರ, ಧಾರವಾಡ

**ಅಪೂರ್ವವಾದ ಸಾಹಸ!** **ಹೊಸಗ್ರಂಥಮಾಲೆ!**

ಗಹನವಾದ ವಿಷಯಗಳ ಮೇಲೆ ಅತ್ಯಂತ ಸುಲಭವಾದ ಗ್ರಂಥಗಳನ್ನು ಬರಿಸುವುದೇ ಇದರ ಉದ್ದೇಶ.

ಪುಟಗಳು. ೧೧೦-೧೨೫

## ಚಂದಾ ದರಗಳು

**ಆಶ್ರಯದಾತರು:-** ೧೦೦ ಅಥವಾ ಹೆಚ್ಚು ರೂಪಾಯಿಗಳನ್ನು ಕೊಡುವವರು.

**ಪೋಷಕರು:-** ವರ್ಷಕ್ಕೆ ೧೦ ರೂಪಾಯಿಗಳನ್ನು ಕೊಡುವವರು.

**ಚಂದಾದಾರರು:-** (ಅ) ಆರು ಗ್ರಂಥಗಳಿಗೆ ೫-೮-೦
(ಬ) ಮುಂಗಡ ಒಂದು ರೂಪಾಯಿ ಕೊಟ್ಟು ಯಾವತ್ತು ಗ್ರಂಥಗಳನ್ನು ಕೊಳ್ಳಲೊಪ್ಪಿದವರು.

ಗ್ರಂಥಗಳನ್ನು ಕಳಿಸುವುದಕ್ಕೆ ಬೇಕಾಗುವ ಅಂಚೇ ವೆಚ್ಚವನ್ನು ಎಲ್ಲರೂ ಪ್ರತ್ಯೇಕವಾಗಿ ಕೊಡಬೇಕಾಗುವುದು.

(ವರ್ಷದಲ್ಲಿ ಒಟ್ಟು ಆರು ಗ್ರಂಥಗಳನ್ನು ಹೊರಡಿಸುವುದು ನಮ್ಮ ಸಂಕಲ್ಪ)

**ಆಲೂರ ವೆಂಕಟರಾಯ,**
ಸಂಪಾದಕ.

